# ಮಾನಸಿ

ತಿಂಗಳ ಪತ್ರಿಕೆ

ಜೂನ್ : 1999

- ❋ ಕಾರ್ಗಿಲ್ ಘರ್ಷಣೆ ಅನಿವಾರ್ಯವಾಗಿತ್ತೇ?
- ❋ ಹೆಣ್ಣು ಮತ್ತು ಅವಳ ಸಾಮರ್ಥ್ಯ ಮಾಪನ
- ❋ ವಿಕಾಸನ – ಮಕ್ಕಳ ನಂದನವನ
- ❋ ನಮ್ಮನ್ನು ಒಟ್ಟಿಗೆ ಬದುಕಲು ಬಿಡಲಿಲ್ಲ
- ❋ ಸುಪ್ರೀಂ ಕೋರ್ಟ್ ನೀಡಿದ ಮಹತ್ವದ ತೀರ್ಪು

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 14 ಸಂಚಿಕೆ : 5

ಜೂನ್ : 1999





ವಿಳಾಸ

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067



ಸೂಚನೆ : ಬಿಡಿ ಪ್ರತಿ 3-00 ರೂ.

ವಾರ್ಷಿಕ ಚಂದಾ 40-00 ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ......**






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



ಕಾರ್ಗಿಲ್ ಕಾಶ್ಮೀರದ ಸಮಸ್ಯೆಯ ಜೊತೆ ತಳಕು ಹಾಕಿಕೊಂಡಿದೆ. ಕಾಶ್ಮೀರದ ಸಮಸ್ಯೆ ದೇಶದ ವಿಭಜನೆಯ ರಾಜಕೀಯದೊಂದಿಗೆ ಬೆರೆತುಕೊಂಡಿದೆ. ಈ ಸಿಕ್ಕುಗಳನ್ನು ಕಾರ್ಗಿಲ್‌ನ ಶಸ್ತ್ರೋಪಕರಣಗಳ ಯುದ್ಧ ಬಗೆಹರಿಸುವುದಿಲ್ಲ. ಇಪ್ಪತ್ತು-ಇಪ್ಪತ್ತೆರಡರ ಕನಸುಗಾರ ಹುಡುಗರು ರಾಷ್ಟ್ರಾಭಿಮಾನ, ದೇಶಾಭಿಮಾನದ ಹೆಸರಿನಲ್ಲಿ ಜೀವ ತೆತ್ತುತ್ತಿರುವುದರಿಂದ ಬಗೆಹರಿಯುವುದಿಲ್ಲ. ಬದಲಾಗಿ ದೇಶಾಭಿಮಾನದ ಹೆಸರಿನಲ್ಲಿ ಬಹುಮಂಧಿಯ ಅಮೂಲ್ಯ ಜೀವನವನ್ನು ಈ ಯುದ್ಧ ಕಸಿದುಕೊಳ್ಳ ತೊಡಗಿದೆ.

ಸ್ತ್ರೀವಾದಿಗಳು ಯಾವಾಗಲೂ ಈ ಶಸ್ತ್ರೋಪಕರಣಗಳ ವಿರುದ್ಧ, ಸೈನಿಕಾಚರಣೆಯ ವಿರುದ್ಧ ಮಾತನಾಡುತ್ತಲೇ ಬಂದಿದ್ದಾರೆ. ಕಾರ್ಗಿಲ್-ಘರ್ಷಣೆಯ ಬಗ್ಗೆಯು ಇದನ್ನೇ ಒತ್ತಿ ಹೇಳಬೇಕಾಗಿದೆ. ಗಡಿವಿವಾದ, ಕಾಶ್ಮೀರದ ವಿವಾದ ಎರಡು ದೇಶಗಳು ಮಾನಸಿಕವಾಗಿ ಹಾಗೂ ರಾಜಕೀಯ ಹಂತದಲ್ಲಿ ಹೋರಾಡಿ ಗೆಲ್ಲಬೇಕಾದ ವಿಚಾರ. ಕಾಶ್ಮೀರದ ಜನತೆಯನ್ನು ಒಟ್ಟಿಗೆ ಇಟ್ಟುಕೊಂಡು, ಜನರ ಭಾಗಿತ್ವದೊಂದಿಗೆ ಪ್ರಜಾಪ್ರಭುತ್ವದ ರೀತಿಯಲ್ಲಿಯೇ ಬಗೆಹರಿಯಬೇಕಾದ ವಿಚಾರ. ಗಡಿ ಪ್ರದೇಶದ ಜನ - ವೈರತ್ವದ ಹಿನ್ನೆಲೆಯಲ್ಲಿ ನಿರಾಶ್ರಿತರಾಗಬೇಕಿಲ್ಲ. ದುರ್ದೈವದಿಂದ ನಮ್ಮ ರಾಷ್ಟ್ರೀಯತೆಯ ಕಲ್ಪನೆಗಳು ಗಡಿಪ್ರದೇಶದ ಪರಮಾಧಿಕಾರದ ಕಲ್ಪನೆಗಳು ಕಾರ್ಗಿಲ್‌ನ್ನು ರಣರಂಗವನ್ನಾಗಿಸಿವೆ.

ಭಾರತ ಹಾಗೂ ಪಾಕಿಸ್ತಾನ ಎರಡೂ ದೇಶಗಳೂ ತಮ್ಮ ಆಂತರಿಕ ಬಿಕ್ಕಟ್ಟುಗಳನ್ನು ಬಗೆಹರಿಸಲಾರದೇ ಅದಕ್ಕೆ ಬದಲಾಗಿ ಕಾರ್ಗಿಲ್‌ನ್ನು, ಕಾರ್ಗಿಲ್ ಘರ್ಷಣೆಯನ್ನು ಒಂದು ಅವಕಾಶವಾಗಿ ಮನಸ್ಸು ಕೇಂದ್ರೀಕರಿಸುವ ವಿಚಾರವಾಗಿ ಬಳಸಿಕೊಳ್ಳುತ್ತಿದ್ದಾರೆ. ಅಮೆರಿಕ - ಒಂದು ಕಡೆ ಶಸ್ತ್ರಾಸ್ತ್ರ ಸರಬರಾಜು ಮಾಡುತ್ತಲೇ ಇನ್ನೊಂದು ಕಡೆ ಶಾಂತಿ ಮಂತ್ರ ಹಾಡತೊಡಗಿದೆ. ಎರಡೂ ದೇಶಗಳ ರಾಜಕೀಯ ಅಸ್ಥಿರತೆಯನ್ನೂ ಸಹ ಈ ಕಾರ್ಗಿಲ್ ಘರ್ಷಣೆ ಪ್ರತಿಬಿಂಬಿಸುತ್ತದೆ. ಈ ಬಗ್ಗೆ ಪ್ರತಿಯೊಬ್ಬ ನಾಗರಿಕನೂ ಕೂಡ ಮಾತನಾಡಬೇಕಿದೆ. ಯುದ್ಧ ತಕ್ಷಣವೇ ನಿಲ್ಲಬೇಕೆಂಬುದನ್ನು ಕಾಳಜಿಯುಳ್ಳ ಪ್ರತಿಯೊಬ್ಬ ನಾಗರಿಕನೂ ಧ್ವನಿ ಎತ್ತಿ ಹೇಳಬೇಕಾಗಿದೆ.

●

ಮಾನವನೆಂಬೊನು
ಮಣ್ಣಿಗೆ ಮಾಲೀಕ.
ಆದನೆಂಬ ಮತ್ತಿನಲಿ
ಗೆರೆ ಎಳೆದು 'ಗಡಿ' ಎಂದ

ಹಮ್ಮಿನಲಿ ಬೀಗಲು
ಕಾದಾಟದಾಟ ಆಡಿದೆ
'ಜೀವ'ಗಳು ಶವವಾದವು
ಗಡಿ ಆಚೆ, ಈಚೆ
ಗಡಿಯ ಮ್ಯಾಜಿಕ್‌ನಿಂದ

ಎರಡೂ ಕಡೆ ಹರಿದ ನೆತ್ತರೊಂದೆ
ನಂದಿದ ಜೀವವೊಂದೆಯಾದರೂ
ಜೀವ ತೆತ್ತವರು ವೀರ -
ಮರಣ ಹೊಂದಿದರು
ಜೀವ ತೆಗೆದವರು
ವೀರಯೋಧರಾದರು.
ಒಡಲು ಅನುಭವಿಸುವ ಸಂಕಟಕೆ
ಗಡಿಯೂ ಇಲ್ಲ
ಆಚೆ - ಈಚೆಯೂ ಇಲ್ಲ.

# ಕಾರ್ಗಿಲ್ - ಘರ್ಷಣೆ ಅನಿವಾರ್ಯವಾಗಿತ್ತೇ?

ಕಾರ್ಗಿಲ್ ಘರ್ಷಣೆಯನ್ನು ಪ್ರಾರಂಭದಲ್ಲಿ 'ಯುದ್ಧ' ಎನ್ನಲಾಗುತ್ತಿರಲಿಲ್ಲ. ಆದರೆ ಅದು ಯುದ್ಧ ಎನ್ನುವುದು ಈಗ ಸಾಬೀತಾಗತೊಡಗಿದೆ. ಸರ್ಕಾರವು ಸೆನ್ಸಾರ್‌ಷಿಪ್ ಮಾಡ ತೊಡಗಿದೆ. ಜೂನ್ ೪ ರಂದು ಸರ್ಕಾರವು ಪತ್ರಿಕೋದ್ಯಮಿಗಳು ಕಾರ್ಗಿಲ್‌ಗೆ ಹೋಗುವುದನ್ನು ನಿಷೇಧಿಸಿತು. ಈಗ ಆಯ್ಕೆಮಾಡಿ ವರದಿಗಾರರನ್ನು ಕರೆದುಕೊಂಡು ಹೋಗುತ್ತೇವೆ ಎನ್ನಲಾಗುತ್ತಿದೆ. ಮೊದಲು ಒಳನುಗ್ಗಿದ ಪಾಕಿಸ್ತಾನಿಗಳ ಬಗ್ಗೆ ಸರ್ಕಾರ ವರದಿ ಸಲ್ಲಿಸುತ್ತಿತ್ತು. ನಂತರದಲ್ಲಿ ಅವರು ಆಕ್ರಮಿಸಿಕೊಂಡ ಸ್ಥಳಗಳ ಬಗ್ಗೆ ವರದಿ ಸಲ್ಲಿಸಿತು.

ಭಾರತ ಸರ್ಕಾರ ಪಾಕಿಸ್ತಾನದ ಟಿ.ವಿ. ಚಾನಲ್ ನಿಷೇಧಿಸಿದೆ. ರಾಜ್ಯಸಭೆ ಸೆಷನ್ ಕರೆಯಲು ನಿರಾಕರಿಸಿದೆ. ಒಳನುಗ್ಗಿದ ಆಕ್ರಮಣಕಾರರ ಮರಣದ ಸಂಖ್ಯೆಯನ್ನು ಏರುಪೇರಾಗಿ ಕೊಡತೊಡಗಿದೆ. ಮೊದಲು ೧೦೦, ನಂತರ ೫೪೯, ನಂತರ ೫೦೦. ಮೇ ೮ ರಂದು ೨೨೭ ಪಾಕಿಸ್ತಾನಿ ಸೈನಿಕರನ್ನು ಕೊಂದಿರುವುದಾಗಿ ಹೇಳಿತು. ಆದರೆ ೩ ಶವಗಳನ್ನು ಮಾತ್ರ ತೋರಿಸಿತು. ಈ ಬಗ್ಗೆ ವರದಿ ಪ್ರಕಟಿಸುವ ಮೊದಲು ಯೋಚಿಸಬೇಕೆಂದು ಪ್ರಧಾನಿ ವಾಜಪೇಯಿ ಕರೆಯಿತ್ತರು. ಇದು ನೀವೇ ಸೆನ್ಸಾರ್ ಮಾಡಿ ಬರೆಯಿರಿ ಎನ್ನುವಂತಹ ಕರೆಯಾಗಿತ್ತು. ಕಾರ್ಗಿಲ್ ಬಗ್ಗೆ ವಿವರಿಸಿ, ವಿಮರ್ಶೆ ಮಾಡಿ ಬರೆಯಬಾರದು ಎಂದು ಹೇಳಲಾಗುತ್ತಿದೆ.

ಕೆ. ಸುಬ್ರಮಣ್ಯ ಹಾಗೂ ಇಬ್ಬರು ಮೊದಲಿನ ಫಾರಿನ್ ಸೆಕ್ರೆಟರಿಗಳು ಈ ಮಾತನ್ನು ಬರೆಯುತ್ತಾರೆ. ಅವರ ಪ್ರಕಾರ ಕಾರ್ಗಿಲ್-ರಾಷ್ಟ್ರದ ಇಚ್ಛಾಶಕ್ತಿಯ ಪರೀಕ್ಷೆ. ಹಾಗಾಗಿ ಕಾರ್ಗಿಲ್ ಬಗ್ಗೆ ಪೋಸ್ಟ್‌ಮಾರ್ಟಂ ತರಹದ ವರದಿಯನ್ನು ಸಲ್ಲಿಸಬಾರದು. ಈ ಕ್ರೈಸಿಸ್‌ಗೆ ಕಾರಣವಾದ ನಮ್ಮ ದೌರ್ಬಲ್ಯ, ವೈಫಲ್ಯತೆಗಳ ಬಗ್ಗೆ ನಾವು ಮಾತನಾಡಬಾರದು. ಏಕೆಂದರೆ ಇದು ನಮ್ಮ ರಾಷ್ಟ್ರದ ಘನತೆಯ ಪ್ರಶ್ನೆ. ನಮ್ಮ ರಾಷ್ಟ್ರಕ್ಕೆ ಇದರಿಂದ ತೊಂದರೆಯಾಗುತ್ತದೆ.

ಇದು ಸತ್ಯವನ್ನು ಮುಚ್ಚಿಡುವ ಹಾಗೂ ಯೋಚನಾ ಶಕ್ತಿಯನ್ನು ಕಿತ್ತುಹಾಕುವ ಪ್ರಯತ್ನ. ಕಾರ್ಗಿಲ್‌ನಲ್ಲಿ ನಡೆಯುತ್ತಿರುವ ಗಲಾಟೆಯ ಬಗ್ಗೆ ಸ್ವತಂತ್ರವಾದ, ವಿಮರ್ಶಾತ್ಮಕ ವಿವರಣೆಗಳೇ ದೊರಕದಿದ್ದರೆ ನಾವು ಸರಿಯಾದ ಯೋಜನೆಗಳನ್ನು ಅನುಸರಿಸುತ್ತಿದ್ದೇವೆಯೇ? ಇಲ್ಲವೇ ಎಂಬುದು ನಾಗರಿಕರಿಗೆ ತಿಳಿಯುವುದು ಹೇಗೆ? ಸರ್ಕಾರಿ 'ತಜ್ಞರೇ' - ಈ ಬಗ್ಗೆ ವಿವರಣೆ ನೀಡಬೇಕೇ? ಇದಕ್ಕೆ ಬೇರೆ ಪರ್ಯಾಯ ವ್ಯವಸ್ಥೆಯೇ ಇಲ್ಲವೇ?

ಸರ್ಕಾರ ಯಾರನ್ನು ಮೂರ್ಖರನ್ನಾಗಿಸಲು ತೊಡಗಿದೆ?

ಪತ್ರಿಕೆಗಳು ಈಗ ಮಾಡಬೇಕಿರುವ ಕೆಲಸವೆಂದರೆ ಸತ್ಯಕ್ಕೆ ಹಾಗೂ ವಿಮರ್ಶಾತ್ಮಕವಾದ ವರದಿಗೆ ಬದ್ಧರಾಗಿರಬೇಕಾಗುತ್ತದೆ. ಸರ್ಕಾರಿ ವರದಿಗಳನ್ನು ಪ್ರಶ್ನಿಸಬೇಕಾಗುತ್ತದೆ.

ಕಾರ್ಗಿಲ್ ಹಾಗೂ ಕಾಶ್ಮೀರದ ಸಮಸ್ಯೆಗೆ ಬಲವಾದ ಸಂಬಂಧವಿದೆ. ಕಾಶ್ಮೀರದಲ್ಲಿ ವಿವಾದವಿಲ್ಲ ಎಂದು ನಾಟಕ ಮಾಡುವುದು ಸರಿಯಲ್ಲ. ಅಮೇರಿಕದ ಒಪ್ಪಂದ ಹಾಗೂ ಸಿಮ್ಲಾ ಒಪ್ಪಂದಗಳೂ ಇದನ್ನು ಗುರುತಿಸುತ್ತದೆ. ಅಂದ ಮಾತ್ರಕ್ಕೆ ಪಾಕಿಸ್ತಾನ LOC ಬದಲಾಯಿಸಬೇಕೆಂದು ಅರ್ಥವಲ್ಲ.

ಇಂದಿನ ಕಾರ್ಗಿಲ್ ಬಿಕ್ಕಟ್ಟು ಕಾಶ್ಮೀರದ ವಿವಾದದಿಂದಾಗಿ ಅರ್ಥ ಹುಟ್ಟಿಕೊಂಡಿದ್ದರೆ, ಗಡಿ ಸಮಸ್ಯೆಯಿಂದ ಅರ್ಥ ಹುಟ್ಟಿಕೊಂಡಿದೆ. ಇಂಡಿಯಾ, ಪಾಕಿಸ್ತಾನದ ವೈರತ್ವದಿಂದಾಗಿ ನಾಗರಿಕರು ಇಂದು ಬಲಿಪಶುಗಳಾಗುತ್ತಿದ್ದಾರೆ. ಕಾರ್ಗಿಲ್‌ನ ಶಿಯಾಸಗಳು ಇಂದು ನಿರಾಶ್ರಿತರಾಗುತ್ತಿದ್ದಾರೆ. ಇದು ಅನಿವಾರ್ಯವಾಗಿರಲಿಲ್ಲ.

ಕಾಶ್ಮೀರ ಬರಿಯ ವಿಭಜನೆಯ ಪ್ರಶ್ನೆ ಮಾತ್ರವಲ್ಲ. ಇದು ಮುಸ್ಲಿಂರ ಅಸ್ತಿತ್ವದ ಪ್ರಶ್ನೆಯೂ ಅಲ್ಲ. ಕಾಶ್ಮೀರದ ಪ್ರಶ್ನೆಯನ್ನು ಬಗೆಹರಿಸುವಲ್ಲಿ ಕಾಶ್ಮೀರಿಗಳಿಗೆ ಧ್ವನಿ ನೀಡುವ ಅಗತ್ಯವಿದೆ. ಇದು ಪ್ರತಿಯೊಬ್ಬರ ಸ್ಥಿರತೆಯನ್ನೂ ಭದ್ರ ಮಾಡುತ್ತದೆ. ಭಾರತ ಹಾಗೂ ಪಾಕಿಸ್ತಾನದ ಜೊತೆಗಿನ ಕಾಶ್ಮೀರದ ಸಂಬಂಧವು ಆಧುನಿಕ ಭಾತೃತ್ವ ಹಾಗೂ ಜಾತ್ಯಾತೀತತೆಯ ಆಧಾರದ ಮೇಲೆಯೇ ತೀರ್ಮಾನವಾಗಬೇಕಾಗಿದೆ.

ಶಾಂತಿ ಒಪ್ಪಂದದಲ್ಲಿ ಕಾಶ್ಮೀರಿ ಜನರನ್ನು ಒಳಗೊಳ್ಳುವುದು ಇಡಿಯ ಸಮಸ್ಯೆಯ ಬಣ್ಣವನ್ನೇ ಬದಲಾಯಿಸಿಬಿಡುತ್ತದೆ. ಸರ್ಕಾರ, ಮುಖ್ಯ ಪತ್ರಿಕೆಗಳು, ಟೆಲಿವಿಷನ್ ಕಾಶ್ಮೀರದ ಸ್ವಾತಂತ್ರ್ಯದ ನಾಯಕರ ಧ್ವನಿಯನ್ನೇ ಮುಚ್ಚಿಹಾಕಿಬಿಟ್ಟಿದ್ದಾರೆ. ಅವರ ಧ್ವನಿ ಎಲ್ಲರಿಗೂ ಕೇಳಿಸಬೇಕಿದೆ.

ಯಾವುದೇ ದೇಶ ೧೯೪೭, ೫೦, ೫೩, ೭೫ರ ಒಪ್ಪಂದಗಳಿಗೆ ಜಗ್ಗಿ ಹಿಡಿದುಕೊಳ್ಳುವ ಬದಲು ಪ್ರಜಾಪ್ರಭುತ್ವಕ್ಕೆ ಧ್ವನಿ ಕೊಡಬೇಕಾಗಿದೆ. ಕಾಶ್ಮೀರಿಗಳಿಗೆ ಹೆಚ್ಚು ಅವಕಾಶ ನೀಡಬೇಕಾಗಿದೆ. ವೈರತ್ವದ ಹೊರಗಿರುವ ಪ್ರಜಾಪ್ರಭುತ್ವ, ಸಂಸ್ಕೃತಿ, ವೈವಿಧ್ಯತೆಗೆ ಈ ರೀತಿಯ ಜನರ ನಿರ್ಣಯದ ಅಗತ್ಯವಿದೆ.

ಇಲ್ಲಿಯವರೆಗೆ - ಕಾಶ್ಮೀರದ ವಿಚಾರದಲ್ಲಿ ಎರಡು ದೇಶಗಳು tension ನಿಂದ ಕೂಡಿರುವುದೇ ಆಗಿದೆ. ಲಾಹೋರ್‌ನಲ್ಲಿ ಒಂದು ಪ್ರದೇಶ ಬಿಟ್ಟರೆ ಗಡಿ ಪ್ರದೇಶಗಳೆಲ್ಲ ಮುಚ್ಚಲ್ಪಟ್ಟಿವೆ. ಲಾಹೋರ್‌ನಲ್ಲಿ - ಈ ಪ್ರದೇಶದಲ್ಲಿಯೇ ಪಾಕಿಸ್ತಾನ್ ಹಾಗೂ ಇಂಡಿಯಾದ ಪ್ರಧಾನಮಂತ್ರಿಗಳು ಭೇಟಿಯಾಗಿ ಬಸ್ ಸರ್ವೀಸ್‌ನ್ನು ಡೆಲ್ಲಿಗೆ ಪ್ರಾರಂಭಿಸಿದರು. ಇದರಿಂದ ಕಳೆದ ವರ್ಷ ಅಣುಶಕ್ತಿ ಪರೀಕ್ಷೆಯಿಂದ ತೀವ್ರಗೊಂಡಿದ್ದ ಎರಡು ದೇಶಗಳ ವೈರತ್ವ ಕಡಿಮೆಯಾಗಬಹುದೆಂದು ಎಣಿಸಿದ್ದು ಸುಳ್ಳಾಗಿದೆ.

ನಿಜವಾದ ಯುದ್ಧಗಳು ಮನಸ್ಸಿನಲ್ಲಿ ಹೋರಾಡಿ ಗೆಲ್ಲುವುದಾಗಿದೆ. ಕಾಶ್ಮೀರದ ವಿವಾದದ ಬಗ್ಗೆ ಎರಡು ದೇಶಗಳೂ ಬಿಗಿಯಾದ ನಿಲುವನ್ನು ಹೊಂದಿವೆ. ಎರಡು ದೇಶಗಳಲ್ಲಿನ ರಾಜಕೀಯ ನಾಯಕತ್ವದ ಅರಾಜಕತೆಯ ಸನ್ನಿವೇಶದಲ್ಲಿ ಕಾರ್ಗಿಲ್ ಘರ್ಷಣೆ - ಯುದ್ಧ ಹುಟ್ಟಿಕೊಂಡಿದೆ. ಆಂತರಿಕ ಘರ್ಷಣೆಗಳಿಂದ ಜನರ ಮನಸ್ಸನ್ನು ಬೇರೆತ್ತ ಸೆಳೆಯಲು ಕಾರ್ಗಿಲ್ ಯುದ್ಧ ಅವರಿಗೆ ಒಳ್ಳೆಯ ಅವಕಾಶ ಕಲ್ಪಿಸಿಕೊಡತೊಡಗಿದೆ. ಗಡಿಪ್ರದೇಶದ ಪರಮಾಧಿಕಾರ, ಸಮಸ್ತತೆಯ ಕಲ್ಪನೆಗಳು, ರಾಷ್ಟ್ರೀಯತೆಯ ಕಲ್ಪನೆಗಳು ದುರಹಂಕಾರಗಳ ಖಾಲಿತನವನ್ನು ತೋರಿಸುವವಾಗಿವೆ.

ಅದೃಷ್ಟವಶಾತ್ ಸ್ಥಳೀಯ ಹಂತದಲ್ಲಿ ರಾಜಕೀಯದ ಬಗೆಗಿನ ಸಂಭಾಷಣೆ ಪ್ರಾರಂಭವಾಗಿದೆ. ಹೇಗ್‌ನಲ್ಲಿ ಶಾಂತಿ ಸಭೆ ನಡೆಯುವ ಸಂದರ್ಭದಲ್ಲಿಯೇ ಬಹುಸಂಖ್ಯಾತ ಕಾಶ್ಮೀರಿಗಳು ಮೊದಲ ಬಾರಿಗೆ ಒಟ್ಟಿಗೆ ಬಂದು ಹಿಂಸೆಯನ್ನು ಕೊನೆಗಾಣಿಸುವುದಕ್ಕೆ, ಕಾಶ್ಮೀರಿಗಳ ಮಧ್ಯೆ ಮುಕ್ತ ಸಂಭಾಷಣೆಗೆ ಹಾಗೂ ಕಾಶ್ಮೀರದ ಶಾಂತಿ - ಸೌಹಾರ್ದತೆಯ ಬದುಕಿಗೆ ಕರೆ ನೀಡಿದ್ದಾರೆ. ಇದು ಸೃಷ್ಟಾತ್ಮಕ ಹೆಜ್ಜೆ ಎಂದು ನಾವು ಗುರುತಿಸಬಹುದಾಗಿದೆ. ನಿಜವಾದ ಬದಲಾವಣೆ ಹೀಗೆ ಒಳಗಿನಿಂದ ಬರಬಹುದೇ ಹೊರತು ಸೈನಿಕ ಪಡೆಗಳ ಘರ್ಷಣೆಯಿಂದಲ್ಲ, ಯುದ್ಧದಿಂದಲ್ಲ. ಈ ಯುದ್ಧ-ಅಣುಶಕ್ತಿಯಿಂದ ಎರಡೂ ದೇಶಗಳನ್ನು ಹಾಳುಮಾಡುವ ಮೊದಲು ಕಾಶ್ಮೀರದ ಜನರ ಭಾಗಿತ್ವವನ್ನು ಒಳಗೊಂಡ ಶಾಂತಿ ಸಂಧಾನ ಎಲ್ಲರನ್ನೂ ನೋವಿನಿಂದ ಮುಕ್ತಿಗೊಳಿಸಬಹುದಾಗಿದೆ.


*ಆಕರಗಳು*

*'Battles in the mind'*
*By : Teesta setalvad*

*'Truth, the first casuality of current Kashmir conflict'*
*By : Praful Bidwa*

*Pakistan villagers willing to wait for passage to India*
*By : Pamela conetable*


೧೯೯೯ ಜನವರಿ 'ಮಾನಸ' ಪತ್ರಿಕೆಯಲ್ಲಿ ಉಷಾ ಸಚೇತಿ ಅವರ ಲೇಖನ 'ಬಿಡುಗಡೆಯ ಹಾದಿಯತ್ತ - ಸ್ತ್ರೀ ಸಂಘಟನೆ' ಓದಿ ಆಶ್ಚರ್ಯವಾಯಿತು. ಎಸ್. ಗಾಯತ್ರಿಯವರ ೧೯೯೧ರಲ್ಲಿ ಪ್ರಕಟವಾದ 'ಮಹಿಳೆ-ಬಿಡುಗಡೆಯ ಹಾದಿಯಲ್ಲಿ' ಪುಸ್ತಕದ ಪುಟ ೫,೬,೭,೮ ಹಾಗೆಯೇ ಎತ್ತಿ ಇಳಿಸಿರುವ ಅಪ್ಪಟ ಕೃತಿಚೌರ್ಯದ ಲೇಖನ ಇದಾಗಿದೆ. ಇನ್ನೊಬ್ಬರ ಪುಸ್ತಕದಿಂದ ಒಂದು ಪದವನ್ನೂ ಬದಲಿಸದೆ ಅನಾಮತ್ತು ಎತ್ತಿಕೊಂಡು ತಮ್ಮ ಹೆಸರನ್ನು ಹಾಕಿಕೊಂಡಿರುವುದು ನೋಡಿ, ಇದನ್ನು ತಟ್ಟನೆ ತಮ್ಮ ಗಮನಕ್ಕೆ ತರಬೇಕೆಂದು ಈ ಪತ್ರ ಬರೆಯುತ್ತಿದ್ದೇನೆ. ಎಸ್. ಗಾಯತ್ರಿಯವರ ಪುಸ್ತಕದ ಪುಟಗಳ ಜೆರಾಕ್ಸ್ ಕಾಪಿಯನ್ನು ಜೊತೆಯಲ್ಲಿ ಲಗತ್ತಿಸಿದ್ದೇನೆ. ಮಹಿಳಾ ಕಳಕಳಿಯ ತಮ್ಮ ಪತ್ರಿಕೆ, ಮಹಿಳಾ ಅಧ್ಯಯನವನ್ನು ಕುರಿತ ಯಾವುದೇ ಪುಸ್ತಕದ ವಿಭಾಗವನ್ನು ಪ್ರಕಟಿಸುವುದು ತಪ್ಪೇನಲ್ಲ, ಆದರೆ ಮೂಲ ಲೇಖಕಿಯನ್ನು ಹೆಸರಿಸುವುದು ಬೇಡವೆ?

ಶ್ರೀದೇವಿ, ಮೈಸೂರು

ಮೇಲಿನ ಆಕಸ್ಮಿಕ ತಪ್ಪನ್ನು ಗಮನಕ್ಕೆ ತಂದ ಶ್ರೀದೇವಿಯವರಿಗೆ ವಂದನೆಗಳು. ಯಾರದೇ ಪುಸ್ತಕವನ್ನು ಹೆಸರಿಸದೇ ಹಾಗೆಯೇ ಬಳಸಿಕೊಳ್ಳುವುದು ಅಪ್ಪಟ ಕೃತಿಚೌರ್ಯ. ಉಷಾ ಸಚೇತಿಯವರು ಇದನ್ನು ಗಮನಿಸುತ್ತಾರೆಂದು ಭಾವಿಸುತ್ತೇವೆ. ಗಮನಿಸದೇ ಪ್ರಕಟಿಸಿದುದಕ್ಕೆ ನಾವು ವಿಷಾದಿಸುತ್ತೇವೆ.

*ಸಂಪಾದಕ ಮಂಡಳಿ*

# ಹೆಣ್ಣು ಮತ್ತು ಅವಳ ಸಾಮರ್ಥ್ಯ ಮಾಪನ

- ಹೆಚ್. ಎಸ್. ಶ್ರೀಮತಿ

ಪ್ರಸ್ತುತ ಸಮಾಜ ವ್ಯವಸ್ಥೆಯಲ್ಲಿ ಚಾಲ್ತಿಯಲ್ಲಿರುವ ಆದರ್ಶಗಳು, ಅವುಗಳ ದೃಷ್ಟಿಕೋನಗಳು, ಉದ್ದೇಶಗಳು ಮತ್ತು ಅವುಗಳು ಸಾಮಾಜಿಕರಿಂದ ನಿರೀಕ್ಷಿಸುವ ಫಲಿತಾಂಶಗಳು - ಇವುಗಳನ್ನೆಲ್ಲ ಸೂಕ್ಷ್ಮ ಅಧ್ಯಯನಗಳಿಗೆ ಒಳಪಡಿಸುವ ಅಗತ್ಯ ಇಂದು ನಮಗಿದೆ. ಏಕೆಂದರೆ, ಈ ಆದರ್ಶಗಳು ಒಟ್ಟಾರೆಯಲ್ಲಿ ಸಮಾಜದ ಒಳಿತಿಗಾಗಿಯೇ ರೂಪಗೊಂಡಂಥವು ಎಂಬಂತೆ ಪ್ರಶ್ನಾತೀತವಾಗಿ ಪ್ರಚಾರದಲ್ಲಿವೆ. ಆದರೆ ವಸ್ತು ಸ್ಥಿತಿ ಹಾಗಿಲ್ಲ. ಬದಲಿಗೆ ಈ ಕಲ್ಪಿತ ಆದರ್ಶಗಳು ಏಕಪಕ್ಷೀಯವಾಗಿದ್ದು, ಪುರುಷನ ಹಿತವನ್ನು ಕಾಯುವ ಮತ್ತು ಮಹಿಳೆಯ ಮೇಲೆ ಕ್ರೂರವಾದ ದಾಳಿಯನ್ನು ನಡೆಸುವ ಸ್ವರೂಪದವಾಗಿವೆ. ಇದರ ಇನ್ನೊಂದು ಅಪಾಯಕಾರಿ ಮುಖವೆಂದರೆ ಇದು ನಯವಂಚನೆಯ, ಸೋಗಿನ ಸ್ವರೂಪದ್ದೂ ಆಗಿದೆ. ಈ ಸೋಗಿನ ಮುಸುಕನ್ನೆಳೆದು ನಿಜರೂಪವನ್ನು ತೋರುವ ಅವೆಷ್ಟೋ ಸೂಕ್ಷ್ಮ ಅಧ್ಯಯನಗಳನ್ನು ಈಚೆಗೆ ಸ್ತ್ರೀವಾದಿಗಳು ನಡೆಸುತ್ತಿದ್ದಾರೆ. ಪ್ರಸ್ತುತದ ಆದರ್ಶಗಳನ್ನು ನಾವಿನ್ನು ಹೊತ್ತು ಬದುಕಲಾರೆವು ಎಂಬ ಪ್ರತಿಭಟನೆಯನ್ನು ಈ ಅಧ್ಯಯನಗಳು ಸ್ಪಷ್ಟಪಡಿಸುತ್ತಿವೆ.

ವಿವಿಧ ಸಾಮಾಜಿಕ ಅಂಗಗಳಲ್ಲಿನ ಬೇರೆ ಬೇರೆ ನೆಲೆಗಳಲ್ಲಿ ಭಾಗವಹಿಸುತ್ತಿರುವ ಸ್ತ್ರೀ ಪುರುಷರೆಲ್ಲರಿಗೂ ಸಮಾನವಾಗಿ ಮತ್ತು ನ್ಯಾಯಯುತವಾಗಿ ಅನ್ವಯವಾಗುತ್ತವೆ ಎಂಬ ಸೋಗಿನ ನಿಯಮಾವಳಿಗಳು, ಆದರ್ಶಗಳು ಈ ಸಮಾಜ ವ್ಯವಸ್ಥೆಯಲ್ಲಿ ಕಾಲಕಾಲಕ್ಕೆ ರಚನೆಗೊಳ್ಳುತ್ತಾ, ಜಾರಿಗೊಳ್ಳುತ್ತಾ ಇರುತ್ತವೆ. ಈ ರಚನೆಗಳು ಹುಟ್ಟುಹಾಕುವ ಒತ್ತಡಗಳು ಇವುಗಳನ್ನು ಅನುಸರಿಸುವ ವಿಚಾರದಲ್ಲಿ ಯಾರಿಗೂ ಆಯ್ಕೆಯನ್ನೇನೂ ಉಳಿಸುವುದಿಲ್ಲ. ಹೀಗಾಗಿ, ಇವು ಪುರುಷ ಪರವಾಗಿಯೂ, ಸ್ತ್ರೀ ವಿರೋಧಿಯಾಗಿಯೂ ಇವೆ ಎಂಬುದು ಅನುಭವಕ್ಕೆ ಬರುತ್ತಿದ್ದರೂ ಮಹಿಳೆಯರು ಅಸಹಾಯಕರಾಗಿಯೇ ಉಳಿಯುತ್ತಾ ಬಂದಿದ್ದಾರೆ. ಆದರೀಗ ಮಹಿಳೆಯು ಜಾಗ್ರತಳಾಗುತ್ತಿದ್ದಾಳೆ ಮತ್ತು ತನಗಾಗುತ್ತಿರುವ ಅನ್ಯಾಯಗಳನ್ನು ಸರಿಪಡಿಸಲು ಸಮಾಜವನ್ನು ಒತ್ತಾಯಿಸುತ್ತಿದ್ದಾಳೆ. ಮೂರ್ತಸ್ವರೂಪದ ಸಮಸ್ಯೆಗಳನ್ನು ಎದುರಿಸುವುದಕ್ಕೂ, ಅಮೂರ್ತ ಸಮಸ್ಯೆಗಳನ್ನು ಎದುರಿಸುವುದಕ್ಕೂ ಬೇರೆ ಬೇರೆ ದಾರಿಗಳನ್ನೇ ಹುಡುಕಬೇಕಾಗಿದೆ. ಈ ದಿಸೆಯಲ್ಲಿ ವಸ್ತುಸ್ಥಿತಿಯನ್ನು ವಿಶದಪಡಿಸುವ ಸೂಕ್ಷ್ಮ ಅಧ್ಯಯನಗಳು ತುಂಬಾ ಉಪಯುಕ್ತವಾಗುತ್ತವೆ. ಅಂತಹ ಒಂದು ಪ್ರಯತ್ನವಾಗಿ ಹೆಣ್ಣಿನ ಸಾಮರ್ಥ್ಯದ ಪ್ರಶ್ನೆಯನ್ನು ಕುರಿತಂತೆ ಈ ಟಿಪ್ಪಣಿಯನ್ನು ಮಾಡಲಾಗಿದೆ.

ಹೆಣ್ಣು/ಗಂಡುಗಳ ಸಾಮರ್ಥ್ಯವನ್ನು ಈ ಸಮಾಜದಲ್ಲಿ ಈಗಾಗಲೇ ಮಾಪನ ಮಾಡಿಡಲಾಗಿದೆ. ಕೆಲವು ನಿರ್ದಿಷ್ಟವೆಂಬಂತಹ ತೀರ್ಮಾನಗಳನ್ನು ತಲುಪಲಾಗಿದೆ. ಆದರೆ ಈ ಮಾಪನ, ತೀರ್ಮಾನಗಳನ್ನು ಪ್ರಶ್ನಿಸುವ ಅಗತ್ಯವಿದೆ. ಮಾನವ ಪೀಳಿಗೆಗೆ ಸಂಬಂಧಿಸಿದಂತೆ ಬೌದ್ಧಿಕ, ಭಾವನಾತ್ಮಕ ಸ್ಥಿತಿಗತಿಗಳಲ್ಲಿ ಹೆಣ್ಣಿನದು/ಗಂಡಿನದು ಎಂದು ಗುರುತಿಸಬಲ್ಲ ಸಾಮರ್ಥ್ಯದ ಸ್ಪಷ್ಟ ನೆಲೆಗಳಿವೆ ಎಂಬ ತೀರ್ಮಾನವನ್ನು ಮೊದಲು ಪ್ರಶ್ನೆಗೆ ಗುರಿ ಮಾಡಬೇಕು. 'ಮಾನವ ಮಿದುಳಿನಲ್ಲಿ gender ಇದೆ, ಹಾಗಾಗಿ ಮಿದುಳಿನಿಂದ ಉತ್ಪನ್ನವಾಗುವ ಎಲ್ಲ ಸಂಗತಿಗಳನ್ನೂ ಪುರುಷನದು/ಸ್ತ್ರೀಯದು ಎಂದು ಗುರುತಿಸಲು ಸಾಧ್ಯ' ಎಂಬುದು ಅತಿ ದೃಢವಾಗಿ ಮಂಡನೆಗೊಳ್ಳುತ್ತಾ ಬಂದಿರುವ ವಾದ.

ಸ್ತ್ರೀವಾದಿ ಚಿಂತನೆಗಳೂ ಒಂದು ಹಂತದಲ್ಲಿ ಈ ವಾದವನ್ನೇ ಒಪ್ಪಿ, ಈ ದಾರಿಯಲ್ಲೇ ನಡೆದು, ಹಾಗಾದರೆ ಸ್ತ್ರೀ ವಿಶೇಷತೆಗಳು ಯಾವುವು ಎಂಬ ಹುಡುಕಾಟದಲ್ಲಿ ತೊಡಗಿ, ಕೆಲವನ್ನು 'ಇವು' ಎಂದು ಗುರುತಿಸುತ್ತಾ ತಮ್ಮ ಸಮರ್ಥನೆಗೆ ತೊಡಗಿದ್ದೂ ಇದೆ. ಈ ಹಂತದ ಸ್ತ್ರೀವಾದಿ ಚಿಂತನೆಗಳು ಮಹಿಳೆಯು ಈ ವಿಶೇಷತೆಗಳ ಸಂಗೋಪನೆಯನ್ನು ಮಾಡಿಕೊಂಡರೆ ಸಾಕು ಎಂಬಂತೆ, ಇದಕ್ಕೆ ಸಮಾಜವು ತಡೆಯೊಡ್ಡದೆ ನೆರವಿಗೆ ನಿಂತರೆ ಸಾಕು ಎಂಬಂತೆಯೇ ಸಾಗಿದವು. ಮಹಿಳೆಯು ತನ್ನ ವಿಶೇಷತೆಗಳನ್ನು ಹೀಗೆ ಗುರುತಿಸಿಕೊಳ್ಳುವುದು ಅವಳ ಐಡಂಟಿಟಿಯ ಪ್ರಶ್ನೆ ಎಂಬುದಕ್ಕಾಗಿ ಉಪಯುಕ್ತವೇ ಹೌದು. ಆದರೆ ಇದೇ ಅವಳೆದುರು ಮಿತಿಗಳನ್ನು ನಿರ್ಮಿಸಿಬಿಡುವ ಸಂಗತಿಯೂ ಆಗಿಬಿಡಬಹುದು ಎಂದಾಗ, ಈ ಅಪಾಯದ ಬಗ್ಗೆ ಎಚ್ಚರವೂ ತುಂಬಾ ಅಗತ್ಯ. ಮುಂದಿನ ಸ್ತ್ರೀವಾದಿ ಚಿಂತನೆಗಳು ತಾವು ನಡೆಯುತ್ತಿರುವ ದಾರಿಯಲ್ಲಿನ ಈ ಅಪಾಯವನ್ನು ಗ್ರಹಿಸಲು ಸಮರ್ಥವಾದವು. ಏಕೆಂದರೆ, ಸ್ತ್ರೀ ವಿಶೇಷತೆಯನ್ನು ಪ್ರತ್ಯೇಕಿಸಿ ಗುರುತಿಸಿ ಹೊರಟ ಚಿಂತನೆ

ಪುರುಷ ಚಿಂತನೆಗೆ ಪೋಷಕವಾದದ್ದೇ ಆಗಿದೆ ಮತ್ತು ಮಹಿಳೆಯನ್ನು ಸುಲಭವಾಗಿ ಸಿಲುಕಿಸಬಹುದಾದ ಬಲೆಯೂ ಆಗಿದೆ. ಕುಟುಂಬ, ವಿವಾಹಗಳಂತಹ ಭಾವನಾತ್ಮಕ ವಲಯಗಳಲ್ಲಿ ದಾಂಪತ್ಯ, ತಾಯ್ತನಗಳಂತಹ ಹಲವು ಬಲೆಗಳಿವೆ. ಹಲವೊಮ್ಮೆ ಅನಿವಾರ್ಯವಾಗಿ, ಕೆಲವೊಮ್ಮೆ ಪ್ರಿಯವೂ ಆಪ್ತವೂ ಆಗುವುದರಿಂದಾಗಿ ಈ ಬಲೆಗಳಲ್ಲಿ ಮಹಿಳೆ ಸಿಲುಕಿಯೂಬಿಡುತ್ತಾಳೆ. ಮಹಿಳೆಯನ್ನು ಸಮಾಜವು ಭಾವನಾಸ್ತ್ರದಲ್ಲಿ ಬ್ಲಾಕ್‌ಮೇಲ್ ಮಾಡುತ್ತದೆ.

ಮುಂದೆ ತನ್ನ ಜಾಗೃತಿಯ ಹಾದಿಯನ್ನು ಮಹಿಳೆ ಇನ್ನಷ್ಟು ಸ್ಪಷ್ಟವಾಗಿ ಕಾಣತೊಡಗಿದ ಮೇಲೆ ಈ ಕುತಂತ್ರವನ್ನು ಅರ್ಥಮಾಡಿಕೊಳ್ಳಲು ಆರಂಭಿಸಿದ್ದಾಳೆ. ತನ್ನ ಸಾಮರ್ಥ್ಯವನ್ನು ಪುರುಷನ ಸಾಮರ್ಥ್ಯಕ್ಕಿಂತ ಕೆಳದರ್ಜೆಯದೆಂದು ಗುರುತಿಸಲಾಗುತ್ತಿದೆ ಎಂಬ ಬಗೆಗೆ ಚಿಂತಿತಳಾದದ್ದಿದೆ. ಸ್ತ್ರೀ/ಪುರುಷರು ನಿರ್ವಹಿಸಬಹುದಾದ ವೃತ್ತಿಗಳನ್ನು ಸಮಾಜವು ವಿಂಗಡಿಸಿ ಇಟ್ಟಿದೆ. ಅವರು ತೊಡಗಿಕೊಳ್ಳಬಹುದಾದ ಕೆಲಸ ಕಾರ್ಯಗಳು, ಶಿಕ್ಷಣ, ಕಲೆ, ವಿಜ್ಞಾನ, ಸಂಶೋಧನೆ ಎಲ್ಲವನ್ನೂ ನಿಗದಿ ಮಾಡಿ ಇಡಲಾಗಿದೆ. ಒಂದೇ ವೃತ್ತಿ, ಒಂದೇ ಬಗೆಯ ಕೆಲಸ ಕಾರ್ಯಗಳಲ್ಲಿ ತೊಡಗುವ ಸ್ತ್ರೀ/ಪುರುಷರನ್ನು ನಿರ್ದೇಶಿಸುವಾಗ ಭಾಷೆಯೂ ಕೂಡ ಪುರುಷನಿಗಷ್ಟೇ ವೃತ್ತಿಸೂಚಕ ಪದಗಳನ್ನು ಸೃಷ್ಟಿಸುತ್ತದೆ. ಸ್ತ್ರೀಯರ ಭಾಗವಹಿಸುವಿಕೆ ಅಲ್ಲಿ ದಾಖಲಾಗುವುದು ಒಂದು ಅನುಬಂಧವಾಗಿ ಮಾತ್ರವೇ. ಕೆಲವೊಮ್ಮೆ ಅಷ್ಟೂ ಕೂಡ ಇಲ್ಲ. ರೈತ, ಸೈನಿಕಗಳಲ್ಲಷ್ಟೇ ಅಲ್ಲ ಮಾನವ ಎಂದರೂ ಗಂಡು ತಾನೇ? ಡಾಕ್ಟರು, ಇಂಜಿನಿಯರು, ಸಾಹಿತಿ, ಮಂತ್ರಿ - ಇಂಥಲ್ಲಿ ಮಹಿಳೆಯನ್ನು ಸೂಚಿಸಬೇಕಾದ ಒತ್ತಾಯ ಬಂದಾಗ ಪದದ ಹಿಂದೆ 'ಮಹಿಳೆ' ಎಂಬುದನ್ನು ಸೂಚಿಸಿ ಕೈ ಬಿಡಲಾಗುತ್ತದೆ. ಈ ಮಾತನ್ನು ಎಷ್ಟೂ ಮುಂದುವರೆಸಬಹುದು.

ಸದ್ಯಕ್ಕೆ ಮಿದುಳಿನಲ್ಲಿ gender ವಿಂಗಡಣೆ ಇದೆ ಎಂಬ ಮಾತಿಗೆ ಬರೋಣ. ಇದಕ್ಕೆ ನೀಡಲಾಗಿರುವ ವೈಜ್ಞಾನಿಕ ಆಧಾರಗಳಾವುವೂ ಬಲವಾದವಲ್ಲ. ಆದರೂ ಪುರುಷ ಚಿಂತನೆಗೆ ಅನುಕೂಲವಾಗಿ ಇದನ್ನು ಸಾಮಾಜಿಕವಾಗಿ ಬಲಪಡಿಸಿ ಪ್ರಚಾರಕ್ಕಂತೂ ಬಿಡಲಾಗಿದೆ. ಸ್ತ್ರೀವಾದಿ ಚಿಂತನೆಯಲ್ಲಿ ಈ ವಿಂಗಡಣೆಯಲ್ಲಿನ ರಾಜಕಾರಣವನ್ನು ಮುಖ್ಯವಾಗಿ ಗುರುತಿಸಲಾಗುತ್ತಿದೆ. ಈ ವಿಂಗಡಣೆಯು ಮೊದಲಿಗೆ ಮಿದುಳಿನಲ್ಲೇ ಸ್ತ್ರೀ/ಪುರುಷ ವಿಶಿಷ್ಟ ಸಾಮರ್ಥ್ಯಗಳಿವೆ ಎಂಬುದನ್ನು ಹೇಳುತ್ತದೆ. ಮುಂದುವರೆದು ಆ ಪೈಕಿ ಪುರುಷನ ಸಾಮರ್ಥ್ಯವನ್ನು ಶ್ರೇಷ್ಠವೆಂದೂ, ಸ್ತ್ರೀ ಸಾಮರ್ಥ್ಯವನ್ನು ಎರಡನೆಯ ದರ್ಜೆಯದೆಂದೂ ಒಪ್ಪಿಸತೊಡಗುತ್ತದೆ. ಈ ಚಿರಿತನೆಯನ್ನು ಪ್ರತಿಷ್ಠಾಪಿಸಿ ಬೆಳೆಸುತ್ತಾ ಬಂದಿರುವವನು ಪುರುಷನೇ ಎಂಬುದನ್ನೇನೂ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಈಗ ಮಹಿಳೆಯು ಇಂತಹ ಸಿದ್ಧಾಂತಗಳನ್ನು ನಿರಸನಗೊಳಿಸಬೇಕಾಗಿದೆ. ಅವರಂದುಕೊಂಡರೆ ನಮಗೇನು, ಅದರಿಂದ ನಮ್ಮ ಸಾಮರ್ಥ್ಯವೇನೂ ಧಕ್ಕೆಗೊಳ್ಳಲಾರದು ಎಂಬಂತಹ ಹುಂಬ ಧೈರ್ಯವನ್ನು ವಹಿಸಲಾಗದು. ಏಕೆಂದರೆ ಮಹಿಳೆಯ ಬದುಕು, ಅವಳ ಸಮಸ್ಯೆಗಳು, ಮತ್ತವುಗಳ ಪರಿಹಾರಗಳು - ಎಲ್ಲವೂ ಎಲ್ಲ ನೆಲೆಗಳಲ್ಲೂ ಪುರುಷನೊಂದಿಗೆ ತಳುಕು ಹಾಕಿಕೊಂಡೆ ಇರುವಂಥವು. ತನ್ನ ಪಾಡಿಗೆ ತಾನು ಎಂಬ ನಿಲುವು ಅರ್ಥಹೀನ. ಅವನ ಹುನ್ನಾರಗಳ ರಾಜಕಾರಣವನ್ನು ಅರ್ಥಮಾಡಿಕೊಂಡು ನಡೆದಾಗಲಷ್ಟೇ ಅವನನ್ನು ಎದುರಿಸುವುದು ಸಾಧ್ಯವಾಗಬಹುದು.

ಮಾನವ ಪೀಳಿಗೆಯ ಸ್ವಭಾವ - ಗುಣಾವಗುಣ, ಸಾಮರ್ಥ್ಯ, ದೌರ್ಬಲ್ಯ ಎಲ್ಲವೂ - ಗಂಡು ಹೆಣ್ಣುಗಳೆಂಬ ಭೇದವಿಲ್ಲದೆ, ಮೂಲಭೂತವಾಗಿ ಒಂದೇ ಆಗಿರುತ್ತದೆ. ವ್ಯಕ್ತಿವ್ಯಕ್ತಿಗಳ ವಿಶೇಷಗಳಾಗಿ ವೈವಿಧ್ಯಗಳು ಕಾಣಬಹುದೇ ಹೊರತು ಲಿಂಗವ್ಯತ್ಯಾಸದಿಂದಾಗೇನೂ ಕಾಣುವುದಿಲ್ಲ. ಚರಿತ್ರೆಯ ಯಾವುದೋ ಒಂದು ಹಂತದಲ್ಲಿ ಪುರುಷನು ಹೆಣ್ಣಿನ ಮೇಲೆ ನಿಯಂತ್ರಣವನ್ನು ಸಾಧಿಸಿ, ಮುಂದೆ ನಿರಂತರವಾಗಿ ಆ ಹತೋಟಿಯನ್ನು ಮುಂದುವರೆಸುವಲ್ಲಿ ಅವನು ಹಲವು ಹುನ್ನಾರಗಳನ್ನು ನಡೆಸುತ್ತಾ ಬಂದಿದ್ದಾನೆ. ಇದರಲ್ಲಿ ಬಹುಮುಖ್ಯವಾದದ್ದು ಹೆಣ್ಣಿನ ಬದುಕಿನ ಪರಿಸರವನ್ನು ಎಲ್ಲ ನೆಲೆಗಳಲ್ಲೂ ಅನನುಕೂಲಕರವಾಗಿ ಪರಿವರ್ತಿಸುವುದು. ಈ ಮೂಲಕ ಅವಳು ಏನನ್ನು ಸಾಧಿಸಲಾಗದಂತೆ ಮಾಡಿ ಅವಳ ಆತ್ಮವಿಶ್ವಾಸವನ್ನು ನಾಶಮಾಡುವುದು. ಅನನುಕೂಲ ಪರಿಸ್ಥಿತಿಗಳಿಂದಾಗಿ ಬದುಕಿನ ವಿವಿಧ ರಂಗಗಳಲ್ಲಿ ಅವಳು ಅನುಭವಿಸುವ ಸೋಲನ್ನು ಅವಳ ಅಸಾಮರ್ಥ್ಯವೆಂದು ವ್ಯಾಖ್ಯಾನಿಸುವುದು ಮುಂದಿನ ತಂತ್ರ. ಅಸಹಾಯಕತೆಯಿಂದ ಅವಳು ಈ ವ್ಯಾಖ್ಯಾನವನ್ನು ಒಪ್ಪುವ ಹಂತವೂ ಸಹಜವೇ.

ಈ ಕುತಂತ್ರ ದೀರ್ಘಕಾಲದಿಂದ ಸುಲಲಿತವಾಗಿ ನಡೆಯುತ್ತಾ ಬಂದಿದೆ. ನಮ್ಮ ಸಾಮಾಜಿಕ ಪರಿಸರಗಳಲ್ಲಿ ಹೆಣ್ಣಿನ ಅಸಾಮರ್ಥ್ಯದ ನಿದರ್ಶನಗಳು ಎಲ್ಲೆಲ್ಲೂ ದೊರೆಯುವಂತಿವೆ. ಅಬಲೆ, ದಡ್ಡಿ, ಪರಾವಲಂಬಿ, ಆತ್ಮವಿಶ್ವಾಸವಿಲ್ಲದವಳು - ಎಂಬ ವಿಶೇಷಣಗಳನ್ನು ಎಲ್ಲ ಮಹಿಳೆಯರಿಗೂ ಸಾರಾಸಗಟಾಗಿ ಹಚ್ಚಿಬಿಡುವುದೂ ಸುಲಭ. ಹಾಗಲ್ಲದ ಹೆಣ್ಣು ಇದ್ದರೆ ಅದೊಂದು ಎಕ್ಸೆಪ್ಶನ್ ಎಂದಷ್ಟೇ

ಗುರುತಿಸುವುದು. ಮುಂದುವರೆದು ವಿಪರೀತ, ಅಸಹಜ, ಹಾಸ್ಯಾಸ್ಪದ ಎಂದೂ ಬ್ರಾಂಡ್ ಮಾಡಬಹುದು. ಇಷ್ಟು ಢಾಳಾದ ನಿದರ್ಶನಗಳೆದುರು ಮಹಿಳೆಯ ಸಾಮರ್ಥ್ಯ ಎಂಬುದು ಪುರುಷನಿಗೆ ಸಮಾನವಾದುದು. ಆದರೆ ಅವಳ ಸಾಮರ್ಥ್ಯವನ್ನು ತುಳಿದು ಹಿಡಿದಿಡಲಾಗಿದೆಯಷ್ಟೇ ಎಂದು ಸ್ಥಾಪಿಸಬೇಕಾದರೆ ಅದೇನೂ ಸುಲಭದ ಮಾತಲ್ಲ. ಏಕೆಂದರೆ ಹೆಣ್ಣಿನ ಅಸಾಮರ್ಥ್ಯವನ್ನು ಅನುಮಾನಕ್ಕೆ ಆಸ್ಪದವೇ ಇಲ್ಲವೆನ್ನುವಷ್ಟು ನಿದರ್ಶನಗಳೊಂದಿಗೆ, ಅದೊಂದು ಸಿದ್ಧಾಂತವೇ ಎಂಬಷ್ಟು ನಿಖರತೆಯೊಂದಿಗೆ ಪ್ರಬಲವಾಗಿ ನಿರೂಪಿಸಲು ಎಲ್ಲ ಜ್ಞಾನಕ್ಷೇತ್ರಗಳೂ ಪೈಪೋಟಿಯನ್ನೇ ನಡೆಸಿವೆ. ತತ್ತ್ವಜ್ಞಾನ, ಸಮಾಜಶಾಸ್ತ್ರ, ಮನೋವಿಜ್ಞಾನಗಳಿಂದ ಹಿಡಿದು ವೈವಿಧ್ಯಮಯ ವಿಜ್ಞಾನ ತಂತ್ರಜ್ಞಾನಗಳವರೆಗೆ ಎಲ್ಲಾ ಪಾರಂಪರಿಕ ಹಾಗೂ ಆಧುನಿಕ ಚಿಂತನೆಗಳೂ ಈ ವಿಚಾರದಲ್ಲಿ ಹಿಂದೆ ಬಿದ್ದಿಲ್ಲ. ಇನ್ನೂ ಸರಿಯಾಗಿ ಹೇಳಬೇಕೆಂದರೆ ಈ ಚಿಂತನೆಗಳಲ್ಲಿ ಹೆಣ್ಣನ್ನು ಗಂಭೀರವಾಗಿ ಪರಿಗಣಿಸಬೇಕಾದ ಅಗತ್ಯವಾದರೂ ಎಲ್ಲಿದೆ ಎನ್ನುವವರೆಗೂ ಈ ಅವಗಣನೆ ಬೆಳೆದುಬಿಟ್ಟಿದೆ. ಈ ಪರಿಸ್ಥಿತಿಗೆ ಕಾರಣವನ್ನು ಹುಡುಕುತ್ತಾ ಎಲ್ಲೂ ಅಲೆಯಬೇಕಾಗಿಲ್ಲ. ಇವೆಲ್ಲವುಗಳ ಹಿಂದೆಯೂ ಪುರುಷ ಚಿಂತನೆಯೇ ಇದೆ ಎಂಬುದೇ ಎಲ್ಲವನ್ನೂ ವಿವರಿಸುತ್ತದೆ.

ಪುರುಷನು ಹೇರಿರುವ ಈ ಭ್ರಮೆಯ ಒತ್ತಡದಲ್ಲಿ ಸಿಲುಕಿಹಾಕಿಕೊಂಡಿರುವ ಮಹಿಳೆಗೆ ಈ ಭ್ರಮೆಯನ್ನೇ ವಾಸ್ತವವೆಂದು ಒಪ್ಪಿಬಿಡುವಷ್ಟು ಮಂಕು ಕವಿದುಬಿಟ್ಟಿದೆ. ಇದು ಅವಳ ಸಮಸ್ಯೆಯನ್ನು ಮತ್ತಷ್ಟು ಸಂಕೀರ್ಣಗೊಳಿಸಿಟ್ಟಿದೆ. ತನ್ನನ್ನು ತಾನು ಅರಿಯುವ ಅಗತ್ಯವಿರುವ ಈ ನೆಲೆಯಲ್ಲಿ ಮಹಿಳೆಗೆ ಸ್ತ್ರೀವಾದಿ ಚಿಂತನೆಗಳು ಒತ್ತಾಸೆಯಾಗಿ ನಿಲ್ಲಬೇಕಾಗಿದೆ. ಅವಳ ಎಲ್ಲ ಸಮಸ್ಯೆಗಳ ಮೂಲವಾದ ಈ ಭ್ರಮೆಯನ್ನು ನಿರಸನಗೊಳಿಸಿ ಅವಳಲ್ಲಿ ಆತ್ಮವಿಶ್ವಾಸವನ್ನು ತುಂಬಬೇಕಾಗಿದೆ. ಮಹಿಳೆಯು ತನ್ನ ಸಾಮರ್ಥ್ಯವನ್ನು ಗುರುತಿಸಿಕೊಳ್ಳುವಲ್ಲಿ ನೆರವಾಗುವ ಸೂಕ್ಷ್ಮ ಅಧ್ಯಯನಗಳು ಈ ದಿಸೆಯಲ್ಲಿ ತುಂಬಾ ಉಪಯುಕ್ತವಾಗಿವೆ. ಈ ಸೂಕ್ಷ್ಮ ಅಧ್ಯಯನಗಳು ನಮ್ಮ ಸಮಾಜವು ಹೆಣ್ಣಿನ ಸಾಮರ್ಥ್ಯವನ್ನು ಕುರಿತಂತೆ ಹೇಳುವ ತೀರ್ಮಾನ ರೂಪದ ಹೇಳಿಕೆಗಳನ್ನು ಪರೀಕ್ಷೆಗೊಳಪಡಿಸಿವೆ. ಇವುಗಳ ಫಲಿತಾಂಶಗಳು ಪುರುಷ ಸಮಾಜವು ನಿರ್ಮಿಸಿರುವ ಹಲವಾರು ಭ್ರಮೆಗಳನ್ನು ನಿರಸಗೊಳಿಸುವಲ್ಲಿಯೂ ಸಫಲವಾಗಿವೆ. ಅಂತಹ ಕೆಲವು ಮಾದರಿ ಅಧ್ಯಯನಗಳನ್ನಿಲ್ಲಿ ಗಮನಿಸಬಹುದು.

ಶಾಲಾ ತರಗತಿಗಳಲ್ಲಿ ವಿದ್ಯಾರ್ಥಿ / ವಿದ್ಯಾರ್ಥಿನಿಯರ ಬುದ್ಧಿಮಟ್ಟವನ್ನು ಕುರಿತಂತೆ ಇರುವ ಭ್ರಮಾತ್ಮಕ ತೀರ್ಮಾನಗಳಲ್ಲಿ ಮುಖ್ಯವಾದದ್ದು ಹುಡುಗಿಯರು ಕೆಲವು ಕ್ಷೇತ್ರಗಳಲ್ಲಿ ಮಾತ್ರವೇ ಚುರುಕಾಗಿರುತ್ತಾರೆ, ಬಹುಮಟ್ಟಿಗೆ ಈ ಸೂಚಕ ಕ್ಷೇತ್ರಗಳು ಭಾವನಾತ್ಮಕ ತೊಡಗುವಿಕೆಯನ್ನು ಅಪೇಕ್ಷಿಸುವಂಥವು, ಬೌದ್ಧಿಕ ಸಾಮರ್ಥ್ಯವನ್ನು ಅಪೇಕ್ಷಿಸುವ ತತ್ತ್ವಜ್ಞಾನ, ವಿಜ್ಞಾನ ತಂತ್ರಜ್ಞಾನ, ವಿಚಾರ ವಿಮರ್ಶೆಗಳಂತಹ ಜ್ಞಾನಕ್ಷೇತ್ರಗಳಲ್ಲಿ ಹುಡುಗಿಯರು ಹುಡುಗರೊಂದಿಗೆ ಪೈಪೋಟಿಗೆ ನಿಲ್ಲಲಾರರು - ಎಂಬ ಮಾತು. ಇದಕ್ಕೆ ಪೂರಕವೋ ಎಂಬಂತೆ ಈ ಕ್ಷೇತ್ರಗಳಲ್ಲಿ ಮಹಿಳೆಯ ಸಾಧನೆಗಳನ್ನು ತೋರಿಸುವ ನಿದರ್ಶನಗಳೂ ದೊರೆಯುವುದು ಕಷ್ಟ. ಅಪರೂಪಕ್ಕೆ ಅಂತಹ ಸಾಧನೆಯನ್ನು ತೋರಿದ ಮಹಿಳೆಯ ಪ್ರಸ್ತಾಪ ಬಂದರೆ, ಆಕೆಯ ಸಾಧನೆಯನ್ನು ದರ್ಜೆ ಇಳಿಸಿಯೋ, ಅದರ ಹಿಂದೆ ಪುರುಷನ ನೆರವು ಇದ್ದದ್ದರಿಂದ ಮಾತ್ರ ಅದು ಸಾಧ್ಯವಾಯಿತೆಂದೋ ವ್ಯಾಖ್ಯಾನಿಸಲಾಗುತ್ತದೆ. ಅಂದರೆ, ಮಹಿಳೆಯರಿಗೆ ದೊರೆತ ಅವಕಾಶಗಳ ಕೊರತೆ ಒಂದು ಸಮಸ್ಯೆಯಾದರೆ, ಅವಳ ಸಾಧನೆಯನ್ನು ಮೌಲ್ಯಮಾಪನ ಮಾಡುವ ವ್ಯಾಖ್ಯಾನ ವಿಧಾನ ಇನ್ನೊಂದು ಸಮಸ್ಯೆಯಾಗುತ್ತದೆ. ಸಾಹಿತ್ಯ ಕ್ಷೇತ್ರದಲ್ಲಿನ ಮಹಿಳಾ ಸಾಹಿತ್ಯದ ವಿಮರ್ಶೆ, ಸ್ತ್ರೀವಾದಿ ವಿಮರ್ಶೆಯಂತಹ ಸಂದರ್ಭಗಳನ್ನು ಗಮನಿಸಿ.

ವಾಸ್ತವದಲ್ಲಿ ಹುಡುಗ ಹುಡುಗಿಯರಲ್ಲಿ ಬೇರೆಬೇರೆ ದರ್ಜೆಯ ಸಾಮರ್ಥ್ಯ ಎಂದೇನೂ ಇರುವುದಿಲ್ಲ ಎಂಬುದನ್ನು ನಿರೂಪಿಸುವ ಸೂಕ್ಷ್ಮ ಅಧ್ಯಯನಗಳು ಸಾಕಷ್ಟು ಬಂದಿವೆ. ಸುಮಾರು ಹೈಸ್ಕೂಲು ಹಂತದವರೆಗೆ ಹೆಣ್ಣು/ಗಂಡು ಮಕ್ಕಳು ಒಂದೇ ಬಗೆಯ ಸಾಮರ್ಥ್ಯವನ್ನು ತೋರುತ್ತಾರೆ. ಕೆಲವೊಮ್ಮೆ ಹೆಣ್ಣು ಮಕ್ಕಳೇ ಹೆಚ್ಚಿನ ಸಾಮರ್ಥ್ಯವನ್ನು ತೋರುತ್ತಾರೇನೋ ಎಂಬ ಪ್ರಸಂಗಗಳೂ ಕಾಣುತ್ತವೆ. ಇರಲಿ ಈ ಹಂತದಲ್ಲಿ ಸಮಾಜವು ಸ್ತ್ರೀ/ಪುರುಷರಿಗೆಂದು ಪ್ರತ್ಯೇಕ ನಿರ್ದೇಶನಗಳನ್ನು ನೀಡುತ್ತದೆಂಬ ಬಗ್ಗೆ ಮಕ್ಕಳಿಗಿನ್ನೂ ಅರಿವು ಮೂಡಿರುವುದಿಲ್ಲ. ಮಕ್ಕಳು ಬೆಳೆದಂತೆ, ಸಮಾಜದ ನಿರ್ದೇಶನಗಳನ್ನು ಒಪ್ಪುತ್ತಾ, ಒತ್ತಡಗಳಿಗೆ ಒಳಗಾಗುತ್ತಾ ಹೆಣ್ಣು/ಗಂಡು ಮಕ್ಕಳ ಸಾಮರ್ಥ್ಯಗಳಲ್ಲೂ ಏರುಪೇರುಗಳು ಬರತೊಡಗುತ್ತವೆ. ಒಂದು ಲೇಖನವನ್ನೋ, ಪ್ರಬಂಧವನ್ನೋ, ಅದರ ಬರಹ ರೂಪದಲ್ಲಿ ನೋಡಿ ಇದು ಹೆಣ್ಣಿನದು, ಇದು ಗಂಡಿನದು ಎಂದು ಗುರುತಿಸಿಬಿಡಬಹುದು ಎಂಬ ಒಂದು ಮಿಥ್ಯೆ ಇದೆ. ಭಾಷೆ, ನಿರೂಪಣೆ, ವಾದ ಮಂಡಣೆ - ಮುಂತಾದವುಗಳಲ್ಲಿ ಇದನ್ನು ಗಮನಿಸಬಹುದು ಎಂಬ ಮಾತು ಇದೆ. ಆದರೆ, ಇದನ್ನು ಪರೀಕ್ಷಿಸಲೆಂದೇ ನಡೆಸಿದ ಪ್ರಯೋಗಗಳು ಇಂತಹ ಮಾತುಗಳು ಸುಳ್ಳು ಎನ್ನುತ್ತವೆ.

ಇನ್ನು, ಒಂದೇ ಬಗೆಯ ನೌಕರಿಗಳಲ್ಲಿ ತೊಡಗಿಕೊಂಡಿರುವ ಹೆಂಗಸರ/ಗಂಡಸರ ಸಾಮರ್ಥ್ಯಗಳನ್ನು ಕುರಿತಂತೆಯೂ ಸಾಮರ್ಥ್ಯದ ಕುರುಹುಗಳನ್ನು ಲಿಂಗಾಧಾರಿತ ನೆಲೆಗಳಲ್ಲೇ ಕಾಣಬಹುದು ಎಂಬ ವಾದವೂ ಬಂದಿದೆ. ಗುಣ-ಅವಗುಣ, ಬಲ-ದೌರ್ಬಲ್ಯಗಳು ಹೆಣ್ಣು/ಗಂಡುಗಳಲ್ಲಿ ಸಮಾನವಾಗಿಯೇ ಇರುತ್ತವೆ. ಆದರೆ ಆಯಾ ಸಂದರ್ಭಗಳಲ್ಲಿ ದೊರೆಯುವ ಅವಕಾಶಗಳು ಮತ್ತು ಪರಿಸರದ ಅನುಕೂಲ-ಅನಾನುಕೂಲಗಳನ್ನು ಅವಲಂಬಿಸಿ ಸೋಲುಗೆಲವುಗಳು ಪ್ರಕಟಗೊಳ್ಳುತ್ತವೆ. ಬಹುತೇಕವಾಗಿ ಪುರುಷ ಪ್ರಧಾನತೆಯೇ ಆಳುವ ಕ್ಷೇತ್ರಗಳಿವೆ ಎಂದ ಮೇಲೆ ಪುರುಷನ ಸಾಮರ್ಥ್ಯವೂ ಮಹಿಳೆಯ ಅಸಾಮರ್ಥ್ಯವೂ ಸಾಬೀತುಗೊಳ್ಳುವಲ್ಲಿ ಕಷ್ಟವೇನೂ ಆಗಲಾರದು.

ಎಲ್ಲೋ ಕೆಲವು ಅಪರೂಪದ ಪ್ರಸಂಗಗಳನ್ನು ಹೊರತುಪಡಿಸಿದರೆ ಉದ್ಯೋಗ ಕ್ಷೇತ್ರದಲ್ಲಿ ಹೆಣ್ಣಿಗೆ ದೊರೆಯುವುದು ಅಧೀನ ದರ್ಜೆಯ ಅವಕಾಶಗಳೇ. ಈ ಸಂದರ್ಭಗಳಲ್ಲಿ ಅವಳು ಎದುರಿಸಬೇಕಾಗಿ ಬರುವ ದಾರುಣ ಸಮಸ್ಯೆಗಳನ್ನು ಎಷ್ಟೆಷ್ಟು ವಿವರಿಸಿದರೂ ಮುಗಿಯುವುದಿಲ್ಲ. ಇನ್ನು, ಒಂದು ವೇಳೆ ಮಹಿಳೆಯು ಮೇಲಧಿಕಾರಿಯಾಗುವ, ಅವಳ ಕೈಕೆಳಗೆ ಪುರುಷನು ನೌಕರಿ ಮಾಡಬೇಕಾಗುವ ಸಂದರ್ಭ ಬಂದಾಗಲೂ ಹೆಣ್ಣಿನ ಸ್ಥಿತಿ ನಿರಾಳವಾದುದೆಂದೇನಿರುವುದಿಲ್ಲ. ಆ ಮೇಲಧಿಕಾರಿ ಹೆಣ್ಣು ಎಂತೆಂತಹ ಸಂಕೀರ್ಣ ರೂಪದ ದೌರ್ಜನ್ಯಗಳನ್ನೂ, ಸಂಕಷ್ಟಗಳನ್ನೂ ಅನುಭವಿಸಬೇಕಾಗುತ್ತದೆ ಎಂಬುದೂ ವರ್ಣನಾತೀತವೇ. ಆ ಹೆಣ್ಣು ಇಲ್ಲವೇ ಸೋಲನ್ನು ಒಪ್ಪಬೇಕಾಗುತ್ತದೆ, ಅಥವಾ ಅನಗತ್ಯವಾಗಿ ಕಠೋರತೆಯನ್ನು ಆರೋಪಿಸಿಕೊಂಡು ಜನವಿರೋಧಿಯಾಗುವ ಜೊತೆಗೆ ನಗೆಪಾಟಲಿಗೂ ಒಳಗಾಗಬೇಕಾಗುತ್ತದೆ.

ಪ್ರಸ್ತುತದಲ್ಲಿ ನಮ್ಮ ಗ್ರಾಮಪಂಚಾಯತಿಗಳಲ್ಲಿ ಅಧ್ಯಕ್ಷ ಉಪಾಧ್ಯಕ್ಷರುಗಳಾಗಿ ಬರುವ ಮಹಿಳೆಯರ ಬಗ್ಗೆ ಬರುವ ಟೀಕೆ ಟಿಪ್ಪಣಿಗಳನ್ನಿಲ್ಲಿ ಗಮನಿಸಬಹುದು. ಈ ಬಗೆಯ ಅಧಿಕಾರಗಳನ್ನಾಗಲೀ, ಮಹಿಳಾ ಮೀಸಲಾತಿ ಬಿಲ್‌ಗಳಂತಹ ಸಂಗತಿಗಳನ್ನಾಗಲೀ ಈ ಸಮಾಜವು ಪ್ರಸ್ತಾಪಿಸುತ್ತಿರುವುದರ ಹಿನ್ನೆಲೆಗಳೇನೂ ನೇರ, ಸರಳ ಹಾಗೂ ಪ್ರಾಮಾಣಿಕ ಸಂವೇದನೆಗಳ ಫಲಿತಗಳಲ್ಲ. ದೀರ್ಘಕಾಲದಿಂದ ಪುರುಷ ಚಿಂತನೆಯು ಹೆಣೆಯುತ್ತಾ ಬಂದಿರುವ ಸಂಕೋಲೆಗಳು ಹಲವಾರು ಒತ್ತಡಗಳಿಗೆ ಮಣಿದು ಅಲ್ಲಲ್ಲಿ ಸಡಿಲಗೊಳ್ಳುತ್ತಿವೆ. ಇವನ್ನು ಭದ್ರಪಡಿಸುವ ಮತ್ತೆಷ್ಟೋ ಹುನ್ನಾರಗಳನ್ನು ಪುರುಷ ಚಿಂತನೆಯು ಒಡ್ಡುತ್ತಲೂ ಇದೆ. ಸಮಾಜದ ಹಲವು ಸ್ತರಗಳಲ್ಲಿ ಪ್ರಾತಿನಿಧ್ಯವನ್ನು ಪಡೆದುಕೊಳ್ಳುವಲ್ಲಿ ಹೆಣ್ಣು ಅಲ್ಪಸ್ವಲ್ಪ ಗೆಲುವನ್ನು ಸಾಧಿಸಿದರೂ ಪುರುಷ ಚಿಂತನೆಯು ತನ್ನಲ್ಲಿ ಈಗಾಗಲೇ ಸಂಚಿತವಾಗಿರುವ ಹಲವು ತಂತ್ರಗಳೊಂದಿಗೆ ಹೆಣ್ಣಿನ ಮೇಲೆ ದಾಳಿಯನ್ನು ಆರಂಭಿಸುತ್ತದೆ.

ಇದಕ್ಕೆ ಒಂದು ಸಣ್ಣ ನಿದರ್ಶನವಾಗಿ ಮಹಿಳಾ ಮೀಸಲಾತಿ ಮಸೂದೆಯ ಪ್ರಸ್ತಾಪವನ್ನು ಸುತ್ತುವರೆದಂತೆ ನಡೆದಿರುವ ನಮ್ಮ ರಾಜಕೀಯ ವಿದ್ಯಮಾನಗಳನ್ನು ಗಮನಿಸಬಹುದು. ನಮ್ಮ ರಾಜಕೀಯ ಪಕ್ಷಗಳು ಮೀಸಲಾತಿಯಂತಹ ಪ್ರಸ್ತಾಪಗಳನ್ನೂ ಜಾತಿ, ವರ್ಗಗಳಿಗೆ ಸಂಬಂಧಿಸಿದಂತೆ ಎತ್ತಿದಾಗಲಾಗಲೀ, ಈಗ ಮಹಿಳೆಯರನ್ನು ಕುರಿತಂತೆ ಹೇಳುತ್ತಿರುವಾಗಲಾಗಲೀ ಆಯಾ ಸಮುದಾಯದ ಹಿತಚಿಂತನೆಯನ್ನೇನೂ ಅವು ಪ್ರಧಾನವಾಗಿ ಪರಿಗಣಿಸಿಲ್ಲ. ಪ್ರಜಾಪ್ರಭುತ್ವದ ಆದರ್ಶಗಳು ಅಳಿವು ಉಳಿವಿನ ಪ್ರಶ್ನೆಗಳಾಗಿ ಅವುಗಳೆದುರು ನಿಂತಿವೆ. ಅಕ್ಷರಮಟ್ಟಿಗಾದರೂ ಪಕ್ಷಗಳಿಗೆ ಸೋಗನ್ನಾದರೂ ಹಾಕಲೇಬೇಕಾದ ಅನಿವಾರ್ಯವೂ ಇದೆ. ಈವರೆಗೆ ಇಂತಹ ಸೋಗಿನ ಮುಖವಾಡದ ಆದರ್ಶಗಳನ್ನು ಬಳಸಿ ಜಾತಿ, ವರ್ಗಗಳ ಭಂಡಾರಗಳನ್ನು ಸೂರೆ ಮಾಡಲಾಗುತ್ತಿದೆ. ಇದೀಗ ಅದು ಮಹಿಳಾ ಸಮುದಾಯವೆಂಬ ಭಂಡಾರಕ್ಕೆ ವಿಸ್ತರಣೆಗೊಂಡಿದೆಯಷ್ಟೆ. ದಶಕಗಳ ಕಾಲ ಮೀಸಲಾತಿ ಮಸೂದೆ ಜಾರಿಯಲ್ಲಿದ್ದರೂ ಹಿಂದುಳಿದ ಜಾತಿ, ವರ್ಗ, ಬುಡಕಟ್ಟು ಸಮುದಾಯಗಳು ತಮ್ಮ ಬವಣೆಗಳಿಂದ ಮುಕ್ತಗೊಳ್ಳಲು ಸಾಧ್ಯವೇ ಆಗಬಾರದೆಂಬಂತೆ ಹುನ್ನಾರಗಳು ಹೇಗೆ ಜಾರಿಯಲ್ಲಿವೆಯೋ, ಮಹಿಳಾ ಮೀಸಲಾತಿ ಎಂಬ ಈ ಮಸೂದೆಯ ವಿಚಾರಕ್ಕೂ ಆ ಹುನ್ನಾರಗಳ ದಾಳಿಯೇ ಮುಂದುವರೆದಿದೆ. ಕೊಟ್ಟಂತೆಯೂ ಆಗಬೇಕು, ದಕ್ಕಲೂ ಬಾರದು ಎಂಬ ತಂತ್ರ. ಜಾತಿ, ವರ್ಗಗಳ ಮೀಸಲಾತಿಯನ್ನು ಮಹಿಳಾ ಮೀಸಲಾತಿಯೊಂದಿಗೆ ಕಲಸು ಮೇಲೋಗರ ಮಾಡಿ ಗೊಂದಲಗೊಳಿಸುವ ಬೌದ್ಧಿಕ ಕಸರತ್ತುಗಳು ನಡೆಸುವ ಆಟಗಳು ನ್ಯಾಯದ ತೀರ್ಮಾನವನ್ನು ಮುಂದೂಡುವಷ್ಟಕ್ಕಾದರೂ ನೆರವಾಗುತ್ತಿವೆ. ಪ್ರಾಮಾಣಿಕತೆಯ ಕಿಂಚಿತ್ತು ಅಂಶವೂ ಈ ಢೋಂಗಿ ಸಾಮಾಜಿಕ ಚಿಂತನೆಯಲ್ಲಿ ಕಾಣಲಾರದು. ಏನೇ ಆದರೂ ನಯವಂಚನೆಯ ಈ ಆಟವನ್ನು ಇನ್ನಷ್ಟು ಮತ್ತಷ್ಟು ಮುಂದುವರೆಸಲು ಸಾಧ್ಯವಾಗಲಾರದೆಂಬ ಆತಂಕಗಳೂ ಈ ಹುನ್ನಾರಗಳೆದುರು ಇರುವುದು ನಿಜ. ಹಾಗಾಗಿ ಈಗ ಅವು ನಯದ ಭಾಗವನ್ನು ಕಳೆದುಕೊಂಡು ತಮ್ಮ ಮೂಲರೂಪಗಳಲ್ಲಿ

ಕಾಣಲಾರಂಭಿಸಿವೆ. ಇದಕ್ಕೊಂದು ನಿದರ್ಶನವಾಗಿ ಸದ್ಯದ ಒಂದು ಪ್ರಸಂಗವನ್ನು ಗಮನಿಸಬಹುದು. ಮಹಿಳಾ ಮೀಸಲಾತಿಯ ಪ್ರಸ್ತಾಪಕ್ಕೆ ತೊಡಗಿದ ಮೊದಲ ರಾಜಕೀಯ ಪಕ್ಷಗಳಲ್ಲಿ ಜನತಾದಳ ಪ್ರಮುಖವಾದುದು. ತನ್ನ ಗದ್ದುಗೆಯನ್ನು ಉಳಿಸುವಲ್ಲಿ ಈ ಪ್ರಸ್ತಾಪ ನಿರ್ಣಾಯಕವಾದೀತು ಎಂಬ ಆಸೆ ಅಷ್ಟೇನೂ ಫಲಕಾರಿಯಾಗಲಿಲ್ಲ. ಆದರೂ ತನ್ನ ಮಾತುಗಳಲ್ಲೇ ಸಿಲುಕಿಕೊಂಡಿರುವುದರಿಂದಾಗಿ ಸದ್ಯಕ್ಕೆ ನಿರಾಕರಿಸುವುದೂ ಸಾಧ್ಯವಿಲ್ಲ. ಪಾಲಿಸಲು ಇಷ್ಟವಿಲ್ಲ. ಈ ಎಲ್ಲ ಸಂಗತಿಗಳೂ ಈ ರಾಜಕೀಯ ಪ್ರಸಂಗದಲ್ಲಿ ಅನುಮಾನಕ್ಕೆ ಆಸ್ಪದವಿಲ್ಲದೆ ಮುಖ ತೋರಿಸಿಬಿಟ್ಟಿವೆ. ರಾಜ್ಯ ಜನತಾಪಕ್ಷವು ತನ್ನ ಕಾರ್ಯಕರ್ತರನ್ನು ತೃಪ್ತಿಗೊಳಿಸಲು ವಿವಿಧ ಮಂಡಳಿಗಳಲ್ಲಿ ಸಚಿವ ದರ್ಜೆಯ ಅಧ್ಯಕ್ಷ ಪದವಿಗಳನ್ನು ಸೃಷ್ಟಿಸಿತು. ಇವುಗಳಿಗೆ ನೇಮಕಾತಿಗಳನ್ನು ಮಾಡುವಾಗ ಕೇವಲ ನಾಲ್ಕಾರು ಮಹಿಳೆಯರಿಗಷ್ಟೇ ಅವಕಾಶವನ್ನು ನೀಡಲಾಯಿತು. ಈ ಪೈಕಿ ಮಹಿಳೆಗೆ ಮಾತ್ರವೇ ಕೊಡಬಹುದಾಗಿದ್ದ ಒಂದು ಸ್ಥಾನ, ಜಾತಿ ಮೀಸಲಾತಿಯ ಪರಿಧಿಯೊಳಗೆ ಸೇರಬೇಕಾಗಿದ್ದ ಒಂದು ಸ್ಥಾನಗಳೂ ಸೇರಿಹೋದವು. ಪಕ್ಷದ ಪ್ರಧಾನ ಉದ್ದೇಶವೆಂದು ಘೋಷಿಸಿಲಾದ ಮಹಿಳಾ ಮೀಸಲಾತಿಯ ಮಾತನ್ನು ಹೀಗೆ ಮೂಲೆಗೆ ತಳ್ಳಿಬಿಡಲಾಯಿತು. ಸಹಜವಾಗಿ ಈ ಬಗ್ಗೆ ಟೀಕೆಗಳು ಬಂದವು. ಪಕ್ಷದ ಅಧ್ಯಕ್ಷರಲ್ಲಿ ವಿವರಣೆಯನ್ನು ಪತ್ರಕರ್ತರು ಕೇಳಿದರು. ಆ ಅಧ್ಯಕ್ಷರು ನಿರಾಳವಾಗಿ 'ಪಕ್ಷದ ಇನ್ನಿತರ ಹಿರಿಯ ಕಾರ್ಯಕರ್ತರಿಗೆ ಅವಕಾಶ ಕಲ್ಪಿಸಬೇಕಾಗಿ ಬಂದದ್ದರಿಂದ ಹೀಗಾಯಿತು' ಎಂಧು ವಿವರಿಸಿದರು. ಇಂಥಾ ವಿಷಾದನೀಯ ಮಾತುಗಳ ಬಗ್ಗೆ ಯಾವ ಸಂಕೋಚವೂ ಇಲ್ಲವೆಂದಾದರೆ ಪಕ್ಷವು ಮಹಿಳೆಯರ ಪರವಾಗಿ ತೋರಿದ್ದ ನಿಲುವಿನ ಅರ್ಥವನ್ನು ಹುಡುಕಬೇಕೆಂದಾಯಿತು. ಪುರುಷರಿಗೆ ಅಗತ್ಯವಿದೆ ಎನಿಸಿಬಿಟ್ಟರೆ, ಮಹಿಳೆಯರ ಪಾಲಿನದು ಎಂದು ಮೀಸಲಿಟ್ಟದ್ದನ್ನು ಕಿತ್ತುಕೊಟ್ಟರಾಯಿತು ಎಂಬಂತಾಯಿತಲ್ಲ. ಹೀಗಾದದ್ದು ಈ ಒಂದು ಪ್ರಸಂಗದಲ್ಲಿ ಎಂದೇನಲ್ಲ. ಎಂದಿನಿಂದಲೂ ನಡೆಯುತ್ತಾ ಬಂದಿರುವುದೇ ಹೀಗೆ ಎಂಬುದು ಸ್ವಲ್ಪವೇ ಸೂಕ್ಷ್ಮವಾಗಿ ಗಮನಿಸಿದರೂ ಕಾಣುವಂಥದೇ. ಆದರೆ ಇಲ್ಲಿನ ಪ್ರಸಂಗದಲ್ಲಿ ಸೂಕ್ಷ್ಮ ಗೀಕ್ಷ್ಮಗಳೇನೂ ಇಲ್ಲ. ಢಾಣಾಢಂಗುರವಾಗಿ ಜಾರಿಗೊಳಿಸಲಾಯಿತ್ತು. ಸಾರ್ವಜನಿಕವಾಗಿ ಸಾರಲಾಯಿತು. ಈ ಪ್ರದರ್ಶನ ಆತಂಕಕಾರಿಯಾಗಿದೆ. ಇಡೀ ಪ್ರಸಂಗ ನಮಗೆ ಹಲವು ಸೂಚನೆಗಳನ್ನು ನೀಡುವಂತಹುದಾಗಿದೆ. ಮಹಿಳೆಯು ತನ್ನ ಹಕ್ಕುಗಳನ್ನು ಪಡೆಯಬೇಕೆಂದು ಹೋರಾಟಗಳನ್ನು ನಡೆಸುತ್ತಿದ್ದಾಳೆಂದಾಗ ಮೊದಲಿಗೆ ಅವಳನ್ನು 'ನೀನು ಇಂಥದ್ದಕ್ಕೆ ಲಾಯಕ್ಕು, ಇದನ್ನನುಸರಿಸುವುದರಲ್ಲಿ ನಿನ್ನ ಹಿತವಿದೆ' ಎಂಬಂತಹ ಅನುನಯದ ಬಗೆಯ ಧಮಕಿಯನ್ನು ಹಾಕಲಾಗುತ್ತದೆ. ಮುಂದೆ ತರ್ಕವಿತರ್ಕಗಳ ಬೌದ್ಧಿಕ ಕಸರತ್ತುಗಳನ್ನು ಮಾಡಿ ಒಪ್ಪಿಸಲು ಪ್ರಯತ್ನಿಸಲಾಗುತ್ತದೆ. ಇಲ್ಲಿಯೂ ಬೆದರಿಕೆಯ ಅಂಶವು ಬೆರತೇ ಇರುತ್ತದೆ. ಈ ಯಾವುದಕ್ಕೂ ಬಗ್ಗದೆ ಹಕ್ಕಿಗಾಗಿ ಹಟತೊಟ್ಟು ನಿಂತರೆ ದಂಡದ ಪ್ರಯೋಗ ಇದ್ದೆ ಇದೆ. ಒಟ್ಟಿನಲ್ಲಿ ಮಹಿಳೆಯು ತನ್ನ ದನಿಯನ್ನು ಎತ್ತುವ ಎಲ್ಲ ಪ್ರಯತ್ನಗಳನ್ನೂ ಹತ್ತಿಕ್ಕಲಾಗುತ್ತದೆ. ದಾರಿ ಯಾವುದಾದರೂ ಸರಿ.

ತನ್ನ ಸಾಮರ್ಥ್ಯವನ್ನು ನಿರೂಪಿಸಲೇಬೇಕೆಂಧು ಹೆಣ್ಣು ಪ್ರಯತ್ನಿಸುವಾಗಿನ ಸಂದರ್ಭಗಳಂತೂ ದಯನೀಯವೆನಿಸಿಬಿಡುತ್ತವೆ. ಧರ್ಮಬೋಧನೆಯಲ್ಲಿ ನಿರತಳಾಗಿದ್ದ ಮಹಿಳೆಯೊಬ್ಬಳ ಉಪನ್ಯಾಸವನ್ನು ಕೇಳಿದ ಮಹನೀಯನೊಬ್ಬನಿಗೆ ಅವಳು 'ಹಿಂಗಾಲುಗಳ ಮೇಲೆ ನಿಂತು ನರ್ತಿಸುತ್ತಿರುವ ನಾಯಿಯ ಹಾಗೆ' ಕಂಡಳಂತೆ. ಆಕೆಯ ಸಾಧನೆಯ ಮಟ್ಟವನ್ನು ಕಾಣುವ ಯತ್ನವಿರಲಿ, ಅವಳ ಮುಖಕ್ಕೆ ಇದೊಂದು ಬೇರೆ ಕೇಡು ಎಂಬ ತಿರಸ್ಕಾರದ ಈ ವ್ಯಾಖ್ಯಾನ ನಮ್ಮ ಸಮಾಜ ವ್ಯವಸ್ಥೆಗೆ ಹಿಡಿದ ಒಂದು ಕನ್ನಡಿಯೇ ಆಗಿದೆ. ನಮ್ಮ ದಿನನಿತ್ಯದ ಗೃಹ ಪರಿಸರಗಳಿಂದ ಹಿಡಿದು ಎಲ್ಲೆಡೆಯೂ ಮಹಿಳೆಗೆ ಈ ಸಮಸ್ಯೆ ಇದ್ದೇ ಇದೆ. ತನ್ನ ಸಮರ್ಥನೆಗೆಂದು ಅವಳು ಮಾಡುವ ಪ್ರಯತ್ನಗಳೆಲ್ಲವನ್ನೂ ಈ ಸಮಾಜವು ಅಲ್ಲಗಳೆಯುತ್ತಾ ಅವಳನ್ನು ವಿಡಂಬಿಸುತ್ತದೆ, ದೈನಾಸಿಯನ್ನಾಗಿ ಮಾಡಿಬಿಡಲು ಹವಣಿಸುತ್ತದೆ. ಸಮಾಜದ ಈ ಕಾಠಿಣ್ಯವನ್ನು, ಕ್ರೌರ್ಯವನ್ನು ಎದುರಿಸುವ ಸೂಕ್ತ ವಿಧಾನವೊಂದನ್ನು ಮಹಿಳೆ ಇನ್ನೂ ಕಂಡುಕೊಳ್ಳಬೇಕಾಗಿದೆ. ಹೆಂಡಂದಿರ ಕಾಟಕ್ಕೆ ಒಳಗಾದ ಪುರುಷರಿಗೇನೂ ಕಮ್ಮಿಯಿಲ್ಲ ಎಂಬುದನ್ನು ನಿರೂಪಿಸಲು ಯತ್ನಿಸುವ ಹತ್ತು ಹಲವು ಸಾಹಿತ್ಯ, ಕಲೆ ಮತ್ತು ಸಾಂಸ್ಕೃತಿಕ ಕ್ಷೇತ್ರಗಳ ಅಭಿವ್ಯಕ್ತಿಗಳು ರೋಗಪೀಡಿತ ಪುರುಷ ಚಿಂತನೆಯ ಸಾಕಾರ ರೂಪಗಳಾಗಿವೆ. ಕೀಳು ಅಭಿರುಚಿಯ ಈ ಅಭಿವ್ಯಕ್ತಿಗಳು ಪುರುಷ ಚಿಂತನೆಯ ಕ್ರೌರ್ಯದ ಪರ್ಯಾಯ ರೂಪಗಳೂ ಹೌದು. ನಾಯಿಗಿಂತಲೂ ಕಡೆಯಾಗಿ ಹೆಣ್ಣನ್ನು ಪುರುಷನು ನಡೆಸಿಕೊಳ್ಳುತ್ತಾ ಬಂದಿರುವ ಈ ದೀರ್ಘ ಪ್ರಯಾಣದಲ್ಲಿ ರೋಸಿದಾಗೊಮ್ಮೆ ಆ ನಾಯಿ ತಿರುಗಿ ಬೀಳುವುದನ್ನು ಅಪರಾಧವೆಂದು ಪರಿಗಣಿಸಲಾಗುತ್ತದೆನ್ನುವುದು ಆಶ್ಚರ್ಯದ ವಿಷಯವೂ ಅಲ್ಲ.

ಈ ಲೋಕವನ್ನು ತನ್ನಿಷ್ಟದಂತೆ ಅನುಭವಿಸುತ್ತಾ,

ವ್ಯಾಖ್ಯಾನಿಸುತ್ತಾ, ತಾನೇ ಈ ಪ್ರಪಂಚದ ಕೇಂದ್ರವೆಂದು ಬೀಗುತ್ತಾ ಬಂದಿರುವ ಪುರುಷನಿಗೆ, ಹೆಣ್ಣಿಗೂ ಕೂಡ ಈ ಲೋಕವನ್ನು ಕುರಿತಂತೆ ಒಂದು ಅಭಿಪ್ರಾಯವಿರುವುದು ಸಾಧ್ಯ ಎಂಬ ಗುಮಾನಿಯೂ ಇದ್ದಂತಿಲ್ಲ. ಅವಳು ತಾನು ಕಂಡದ್ದನ್ನು ಅಭಿವ್ಯಕ್ತಿಸಲು ತೊಡಗುವುದಂತೂ ಅಸಾಧ್ಯವೇ ಆಗಿಬಿಡುತ್ತದೆ. ಹಾಗೊಮ್ಮೆ ಪ್ರಯತ್ನಿಸಿದರೂ ಅರ್ಥಹೀನವೆನಿಸಿಬಿಡುತ್ತದೆ. ಅಂಥದೊಂದು ಪ್ರಸಂಗವನ್ನು ಸಿಂಥಿಯಾ ಒಜಿಕ್ ಎಂಬಾಕೆ ನಿರೂಪಿಸುತ್ತಾಳೆ : 'ಹೆಣ್ಣಿಗೆ ಕಾಲೇಜು ಶಿಕ್ಷಣ ಬೇಕೆ?' ಎಂಬ ಒಂದು ಚರ್ಚಾಸ್ಪರ್ಧೆ. ಸಭಾಗೃಹ ಪ್ರೇಕ್ಷಕರಿಂದ ತುಂಬಿದೆ. ಆದರೆ ಮಾತನಾಡಲಿದ್ದವರು ಮೂವರು ಮಾತ್ರವೇ. ಮಾನವಶಾಸ್ತ್ರದ ಒಬ್ಬ ಪ್ರೊಫೆಸರ್. ಈಕೆ ಹೆಂಗಸು. ಒಬ್ಬ ಚರಿತ್ರೆ ಪ್ರೊಫೆಸರ್, ಒಬ್ಬ ಸೈಕಾಲಜಿ ಪ್ರೊಫೆಸರ್. ಇವರಿಬ್ಬರೂ ಗಂಡಸರು. ಲೇಡೀಸ್ ಫಸ್ಟ್ ಎನ್ನುವ ಸೋಗಿನ ನಾಗರಿಕತೆಗನುಸಾರವಾಗಿ ಆಕೆ ಮೊದಲು ಮಾತನಾಡಿದಳು. ವಿಷಯವನ್ನು ಕುರಿತಂತೆ ಉನ್ನತ ಶಿಕ್ಷಣದಲ್ಲಿ ಹೆಣ್ಣಿಗೆ ಇರುವ ಅವಕಾಶಗಳು, ಸಮಸ್ಯೆಗಳು ಪರಿಹಾರೋಪಾಯಗಳು ಮೊದಲಾಗಿ ಒಬ್ಬ ಶಿಕ್ಷಿತ ಹೆಣ್ಣಾಗಿ ತನ್ನ ಅನುಭವಗಳೇನು ಎಂಬ ಹಿನ್ನೆಲೆಯಲ್ಲಿ ಮಾತನಾಡಿದಳು. ಸಹಜವಾಗಿ ಮನೆ, ಗಂಡ, ಮಕ್ಕಳು, ಅವರ ಲಾಲನೆ ಪಾಲನೆ, ಅತ್ತೆ ಮಾವ, ತಂದೆ ತಾಯಿ, ಮನೆಗೆಲಸ - ಎಲ್ಲ ಸಂಗತಿಗಳೂ ಬಂದವು. ಹೆಣ್ಣು ಇವೆಲ್ಲವನ್ನೂ ಸಂಭಾಳಿಸುತ್ತಾ ಸಾಮಾಜಿಕವಾಗಿ ಉಪಯುಕ್ತಳೆನಿಸಬೇಕು ಎಂಬ ಅಗತ್ಯವನ್ನು ನಿರಾಕರಿಸದೆ, ಇವೆಲ್ಲದರ ನಡುವೆ ಅವಳ ಉನ್ನತ ಶಿಕ್ಷಣದ ಸಾಧ್ಯತೆಗಳನ್ನು ಕುರಿತು ಆಕೆ ಪ್ರಸ್ತಾಪಿಸಿದಳು. ವಾಸ್ತವವಾಗಿ ಈ ವಿಧಾನ ಅನುಭವವನ್ನು ಆಧರಿಸಿದ ಪ್ರಾಮಾಣಿಕ ರೀತಿಯದಾಗಿತ್ತು. ಆದರೆ ಇದಕ್ಕೆ ದೊರಕಿದ ಪ್ರತಿಕ್ರಿಯೆ ಮಾತ್ರ ಅತ್ಯಂತ ಉದಾಸೀನದ್ದಾಗಿತ್ತು. ಆಕೆಯನ್ನು ಯಾರೂ ಪ್ರಶ್ನಿಸಲೂ ಇಲ್ಲ, ವಿರೋಧಿಸಲೂ ಇಲ್ಲ; ಆದರೆ ಗಂಭೀರವಾದ ಮಾತೆಂದು ಪರಿಗಣಿಸಲೂ ಇಲ್ಲ. ಪ್ರೇಕ್ಷಕರ ನಡುವೆ ಎದ್ದ ಗುಸಗುಸ ಪಿಸಪಿಸಗಳನ್ನು ಕೇಳುತ್ತಾ ಆಕೆ ತನ್ನ ಮಾತನ್ನು ಮುಗಿಸಿ ಕೂತಳು. ಆಮೇಲಿನ ಸರದಿ ಆ ಚರಿತ್ರೆ ಪ್ರೊಫೆಸರನದು ಮತ್ತು ಆ ಸೈಕಾಲಜಿ ಪ್ರೊಫೆಸರನದು. ಅವರಿಬ್ಬರೂ ಬಗೆಬಗೆಯ ಲಘುವಾದ ಜೋಕುಗಳನ್ನು ಹುಡಿಹಾರಿಸುತ್ತಾ ಆಕೆಯ ಉಪನ್ಯಾಸವನ್ನು ವಿಡಂಬನೆ ಮಾಡಿಬಿಟ್ಟರು. ಸಾಲದೆಂಬಂತೆ 'ಹೆಂಗಸನ್ನು ಉನ್ನತ ಹುದ್ದೆಗೆ ಏರಿಸಿದರೆ ಹೀಗೇ ಆಗೋದು' ಅನ್ನುವ ವ್ಯಾಖ್ಯಾನ ಬೇರೆ. ಈಗಂತೂ ಪ್ರೇಕ್ಷಕರು ಈ ವ್ಯಾಖ್ಯಾನವನ್ನು ಅನುಮೋದಿಸಲೆಂಬಂತೆ ಹುಚ್ಚೆದ್ದು ಚಪ್ಪಾಳೆ ತಟ್ಟುತ್ತಾ ನಗೆಗಡಲಿನಲ್ಲಿ ಮುಳುಗಿದರು. ಡಿಬೇಟಿಗೆ ಒಡ್ಡಿದ ವಿಷಯವೇ ನಗೆಪಾಟಲಿಗೊಳಗಾಯಿತು. ಈ ಪ್ರಸಂಗದಲ್ಲಿ ಎರಡು ಸಂಗತಿಗಳು ಗಮನಾರ್ಹ. ಹೆಂಗಸನ್ನು ಕುರಿತದ್ದೇ ಆದ ಸಮಸ್ಯೆಯೊಂದನ್ನು ಎತ್ತಿಕೊಂಡಾಗಲೂ ಹೆಂಗಸಿನ ಅನುಭವದ ಮಾತುಗಳು ಗೇಲಿಗೊಳಗಾಯಿತೆಂಬುದು; ಮತ್ತು ಈ ಬಗೆಗಿನ ಗಂಡಸಿನ ವ್ಯಾಖ್ಯಾನವು ಅನುಮೋದನೆಯನ್ನು ಪಡೆಯಿತು ಎಂಬುದು. ಜೊತೆಗೆ ವಿಷಯವನ್ನು ಸೂಕ್ಷ್ಮಗಳಲ್ಲಿ ಗ್ರಹಿಸುವ, ಮಂಡಿಸುವ ಸಾಮರ್ಥ್ಯವಿದ್ದ ವಿದ್ಯಾವಂತ ಹೆಣ್ಣು ಕೂಡ ಈ ಸಮಾಜವು ತೋರುವ ಬೌದ್ಧಿಕ ಕ್ರೌರ್ಯವನ್ನು ಎದುರಿಸಲು ವಿಫಲಳಾದಳೆಂಬುದು ಹೆಣ್ಣಿನ ಈ ಸಮಸ್ಯೆಯನ್ನು ಕುರಿತು ಎಷ್ಟೋ ಹೇಳುತ್ತದೆ. ಈ ಪ್ರಸಂಗವನ್ನು ನೆನೆದರಂತೂ ಈ ಸಮಾಜದಲ್ಲಿ ಮಹಿಳೆಯರು ತಮ್ಮ ಸಾಮರ್ಥ್ಯವನ್ನು ನಿರೂಪಿಸುವ ಅವಕಾಶವೆಂಬುದು ಸದ್ಯಕ್ಕಂತೂ ಬಗೆಹರಿಯುವ ಮಾತೆಂದು ತೋರುವುದಿಲ್ಲ.

ಅಶಿಕ್ಷಿತ ಹೆಣ್ಣಿನ ಮಾತಿರಲಿ, ಶಿಕ್ಷಿತಳಾದ ಹೆಣ್ಣಿನ ಪರಿಸ್ಥಿತಿಯೂ ಸದ್ಯಕ್ಕೆ ಆಶಾದಾಯಕವಾಗಿಲ್ಲ ಎಂಬುದಕ್ಕೆ ಯಾವುದೋ ದೇಶದಲ್ಲಿ ಯಾರೋ ಒಬ್ಬಾಕೆ ನಡೆಸಿದ ಈ ಅಧ್ಯಯನವನ್ನೇನೂ ಆಧರಿಸಬೇಕೆಂದಿಲ್ಲ. ಇಂತಹ ಚಿತ್ರವತ್ತಾದ ಹಲವಾರು ಪ್ರಸಂಗಗಳನ್ನು ನಮ್ಮ ಸುತ್ತಮುತ್ತಲಿನಲ್ಲೇ ಹೇರಳವಾಗಿ ಕಾಣಬಹುದು. ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಕ ಯಾವ ಕ್ಷೇತ್ರವೂ ಹೊರತಾಗಿ ನಿಲ್ಲಲಾರದು.

ಮಹಿಳೆಯ ಪ್ರಯತ್ನಗಳನ್ನು 'ಹಿಂಗಾಲಿನ ಮೇಲೆ ನಿಂತು ನರ್ತಿಸುತ್ತಾ ಓಲೈಸುವ ನಾಯಿಗೆ' ಹೋಲಿಸುತ್ತಾ ಅಹಂಕಾರದಿಂದ ಬೀಗುವ ಯಾವ ಪುರುಷನಿಗೂ, ಒಟ್ಟಾರೆ ಮಾನವ ಪೀಳಿಗೆಯ ವಾರಸುದಾರನೆಂಬಂತೆ ನಾಗರಿಕತೆ, ಸಂಸ್ಕೃತಿ, ಪ್ರಗತಿ ಎಂಬಂತಹ ಮಾತುಗಳನ್ನಾಡುವ ಹಕ್ಕು ಇರುವುದಿಲ್ಲ. ಆದರೆ ಅವನು ಹಾಗೆ ಆಡದೆ ಉಳಿಯುವುದೂ ಇಲ್ಲ. ಇಂತಹ ಮಾತುಗಳನ್ನು ಅವನ ಭ್ರಮಾತ್ಮಕ ಬೌದ್ಧಿಕತೆಯ ಕುರುಹುಗಳೆಂದು ಮಾತ್ರ ಪರಿಗಣಿಸಿ ಅವಗಣನೆ ಮಾಡುವುದು ಇಂದಿನ ಮಹಿಳೆಯ ಎದುರು ಇರುವ ಒಂದು ದಾರಿ. ಈ ಆತ್ಮವಿಶ್ವಾಸದೊಂದಿಗೆ ಮಾತ್ರ ಅವಳಿಗೆ ತನ್ನ ಮುಂದಿನ ದಾರಿ ಕಾಣುವುದು ಸಾಧ್ಯವಾಗುತ್ತದೆ.

●

# ವಿಕಾಸನ - ಮಕ್ಕಳ ನಂದನವನ

*ಶಿಕ್ಷಣ ಎಂದ ಕೂಡಲೆ ನೆನಪಾಗುವುದು ಶಾಲೆ, ಡೊನೇಷನ್, ಯೂನಿಫಾರಂ, ಶೂಸ್, ಹೋಂವರ್ಕ್, ಟೆಸ್ಟ್, ಪರೀಕ್ಷೆ ಕೊನೆಗೆ ಮಕ್ಕಳು! ಹಾಗಿದೆ ಸದ್ಯದ ಪರಿಸ್ಥಿತಿ. ಆಯೋಗಗಳ ರಚನೆಯಾಗುತ್ತಲೆ ಇರುತ್ತವೆ. ಮಕ್ಕಳ ಪುಸ್ತಕದ ಹೊರೆ ತಗ್ಗಿಸಬೇಕು, ಕಲಿಕೆ ಆಟವಾಗಬೇಕು, ಶಿಕ್ಷಣ ಮಗುವನ್ನು ಪರಿಪೂರ್ಣ ವ್ಯಕ್ತಿಯನ್ನಾಗಿಸಬೇಕು ಇತ್ಯಾದಿ ಸಲಹೆಗಳ ಬಗ್ಗೆ ಕೇಳುತ್ತಲೆ ಇರುತ್ತೇವೆ. ಆದರೆ ಏನೂ ಬದಲಾಗುವುದೇ ಇಲ್ಲ. ಬದಲಾವಣೆ ಬಯಸುವವರು, ಸದ್ಯದ ಶಿಕ್ಷಣದ ಪರಿಸ್ಥಿತಿಯನ್ನು ಟೀಕಿಸುವವರೂ ಸಹ ಮಕ್ಕಳ ಅಕ್ಷರ perfect ಆಗಿಲ್ಲದಿರುವುದಕ್ಕೆ ಕೂಗುವುದು, ಇನ್ನೆ ರ್‍ಯಾಂಕಿನೊಳಗೆ ಬರಬೇಕೆಂದು ಪಟ್ಟು ಹಿಡಿದು ಮಕ್ಕಳನ್ನು ಓದಿಸುವುದನ್ನು ಕಂಡಾಗ ಇದು ಅನಿವಾರ್ಯವೇನೊ ಇದಕ್ಕೆ ಪರ್ಯಾಯವೆ ಇಲ್ಲವೇನೊ ಎನಿಸಿದ ಸಂದರ್ಭದಲ್ಲಿ ಆಕಸ್ಮಿಕವಾಗಿ ವಿಕಾಸನ ಶಾಲೆ ಬಗ್ಗೆ ಕೇಳಿದೆ. ನೋಡಲು ಹೋದಾಗ ನಾನು ideal ಅಂದುಕೊಂಡಿದ್ದು ನಿಜರೂಪದಲ್ಲಿ ನನ್ನೆದುರಿಗೆ ಕಂಡಿತ್ತು. ಶಾಲೆಯೊಂದಿಗೆ ಒಡನಾಡಿದ ಅನುಭವವನ್ನು ಮಾನಸ ಓದುಗರಿಗಾಗಿ ಪ್ರಕಟಿಸುತ್ತಿದ್ದೇವೆ.*

ಬಡಹಳ್ಳಿಯ ಮಕ್ಕಳಿಗೆ ಉಚಿತ ವಿದ್ಯಾಭ್ಯಾಸ.

ಗುಣಾತ್ಮಕವಾದ ಶಿಕ್ಷಣ ನೀಡುವುದು.

ಸ್ವ-ಕಲಿಕೆಗೆ ಒತ್ತು ನೀಡುವುದು.

ಶಿಕ್ಷಣ ಪಡೆದುಕೊಂಡ ಮೇಲೆ ಮಕ್ಕಳು ತಮ್ಮದೆ ವೃತ್ತಿಯನ್ನು ಆರಿಸಿಕೊಳ್ಳಲು ಸಹಾಯ ಮಾಡುವುದು

ಅನೌಪಚಾರಿಕ (Non-Formal) ಶಿಕ್ಷಣಕ್ಕೆ ಸಂಪನ್ಮೂಲ ಕೇಂದ್ರವಾಗಿ ಕೆಲಸ ಮಾಡುವುದು.

ಗಿಡ ನೆಡುವ ಮಹತ್ವ ಮತ್ತು ಪರಿಸರ ಸಮತೋಲನದ ಬಗ್ಗೆ ಅರಿವು ಮೂಡಿಸುವುದು.

ಶಿಕ್ಷಣದ ಶಾಂತಿಗಾಗಿ ಸ್ಪರ್ಧೆಗಾಗಿ ಅಲ್ಲ, ಈ ಗುರಿ ಉದ್ದೇಶಗಳೊಂದಿಗೆ ವಿಕಾಸನ ಶಾಲೆ ಪ್ರಾರಂಭವಾದದ್ದು 21 ವರ್ಷಗಳ ಹಿಂದೆ. ಡೇವಿಡ್ ಹಾರ್ಸ್ ಬರೊ ಎಂಬ ಶಿಕ್ಷಣತಜ್ಞರ ಶಿಷ್ಯೆಯಾದ ಶ್ರೀಮತಿ ಮಾಲತಿಯವರು ಶಾಲೆಯ ಮುಖ್ಯ ಕಾರಣಕರ್ತರು. ಶಾಲೆಯ ಉದ್ದೇಶಗಳಿಗೆ ಚ್ಯುತಿಯಾಗದಂತೆ ಇಲ್ಲಿಯವರೆಗೆ ನಡೆಸಿಕೊಂಡು ಬಂದಿರುವುದರ ಹಿಂದೆ ಮಾಲತಿಯವರ ಅವಿರತ ಶ್ರಮ, ವೃತ್ತಿಯ ಬಗೆಗಿನ ಬದ್ಧತೆ ಕೆಲಸ ಮಾಡಿದೆ.

ಕನಕಪುರ ರಸ್ತೆಯಲ್ಲಿ ಗುಬ್ಬಲಾಳ ಗೇಟ್ ಸ್ಟಾಪ್ ನಲ್ಲಿಳಿದು ಎಡಕ್ಕೆ ಸ್ವಲ್ಪ ದೂರ ಸಾಗಿದರೆ ವಿಕಾಸನ ಶಾಲೆ ಸಿಗುತ್ತದೆ. ಶಾಲೆಗೆ ಹೋದರೆ ಸಣ್ಣ ಕಾಡಿನೊಳಗೆ ಹೋದಂತಾಗುತ್ತದೆ. ಶಾಲೆಯ ಕಾಂಪೌಂಡಿನ ಮೇಲೆ ಸಣ್ಣದಾಗಿ ವಿಕಾಸನ ಶಾಲೆ ಎಂದು ಬರೆದಿದೆ. ಒಳಗೆ ಹೋದರೆ ಎಡಕ್ಕೆ ಮಾಲತಿಯವರ ಸಣ್ಣ ಮನೆ. ಬಲಕ್ಕೆ ಶಾಲೆಯ ಕೋಣೆಗಳು ನಡುವೆ ಗಿಡಮರ, ಮೈದಾನ. ಮನೆಯ ಹಿಂಭಾಗಕ್ಕೆ ವೃತ್ತಾಕಾರದ ಶಾಲೆಯ ಕೋಣೆ. ಪಕ್ಕದಲ್ಲಿ ಪುಟ್ಟ ಆಫೀಸ್ ರೂಂ ಅದರ ಪಕ್ಕಕ್ಕೆ ಶಿಕ್ಷಕರ ನಿವಾಸ. ಇಲ್ಲಿ ಎಲ್ಲಕ್ಕಿಂತ ಪುಟ್ಟಕೋಣೆ ಎಂದರೆ ಆಫೀಸ್ ರೂಂ. ಮಕ್ಕಳೆ ಬೆಳೆಸಿದ ಗಿಡಮರಗಳು, ಕೈತೋಟವಿದೆ. ಮೈದಾನದಲ್ಲಿ ಮಕ್ಕಳೆ ಕಟ್ಟಿದ ಗುಮ್ಮಟಾಕಾರದ ಕೋಣೆ ಇದೆ. ಸರಳ ಸುಂದರವಾದ, ದುಬಾರಿಯಲ್ಲದ ಶಾಲಾಕಟ್ಟಡಕ್ಕೆ ಶಿಕ್ಷಕರು, ಮಕ್ಕಳೆ ದುಡಿದಿದ್ದಾರೆ. ಕ್ಲಾಸ್‌ರೂಮಿನೊಳಗಿನ ಪುಟ್ಟ ಟೇಬಲ್‌ಗಳು, ಚಾರ್ಟ್‌ಗಳು, ವೇಳಾಪಟ್ಟಿ, ಹೂದಾನಿ, ಪುಸ್ತಕಗಳು ಎಲ್ಲವನ್ನು ಮಕ್ಕಳೆ ಮಾಡಿದ್ದಾರೆ. ಇಡೀ ಶಾಲೆಯೇ ಮಕ್ಕಳು ಮತ್ತು ಶಿಕ್ಷಕರ ದುಡಿಮೆ, ಶ್ರದ್ಧೆ, ಉತ್ಸಾಹದ ಫಲವಾಗಿ ಮೂಡಿಬಂದಿದೆ. ಈ ಶಾಲೆಯಲ್ಲಿ ಮಾಲತಿಯವರಲ್ಲದೆ, ಇದೆ ಶಾಲೆಯಲ್ಲಿ ಕಲಿತ ನಾಗು ಮತ್ತು ಚಂದ್ರ ಶಿಕ್ಷಕರಾಗಿದ್ದಾರೆ. ಶ್ರೀಮತಿ ಚಿತ್ರಾ ಅವರು ಇಲ್ಲಿನ ಮಕ್ಕಳಿಗೆ ಹೊಲಿಗೆ ಹೇಳಿಕೊಡುತ್ತಾರೆ. ಸಂಜೀವಿನಿ ಟ್ರಸ್ಟ್‌ನ ಡಾ. ವೇದಾ ಮತ್ತು ಗೀತಾ ಅವರು ಆಗಾಗ್ಗೆ ಇಲ್ಲಿಗೆ ಬಂದು ಆರೋಗ್ಯ, ಶುಚಿತ್ವ ಕುರಿತು ತಿಳಿಸಿಕೊಡುತ್ತಾರೆ. ಈ ಶಾಲೆಯ ಬಗ್ಗೆ ಕೇಳಿ ಕುತೂಹಲಗೊಂಡು ಇಲ್ಲಿಗೆ ಬಂದ ಗೋವಾದ ಶಿಕ್ಷಕರೊಬ್ಬರು ಸ್ವಲ್ಪ ಸಮಯ ಇಲ್ಲಿಯೇ ಕೆಲಸಮಾಡಬೇಕೆಂದು ಉಳಿದಿದ್ದಾರೆ. ಇವರೆಲ್ಲರನ್ನು ಮಕ್ಕಳು ಅಕ್ಕ ಎಂದು ಕರೆಯುತ್ತಾರೆ. ನಾಟಕ, ನೃತ್ಯ, ಕಲೆ, ವಿಜ್ಞಾನ ಹೀಗೇ ವಿವಿಧ ಕ್ಷೇತ್ರಗಳಲ್ಲಿ ಕೆಲಸ ಮಾಡಿರುವ ಅನೇಕರನ್ನು ಶಾಲೆ ಬರಮಾಡಿಕೊಂಡು ವೈವಿಧ್ಯಮಯ ಕಲಿಕೆಯನ್ನು ಮಕ್ಕಳಿಗೆ ನೀಡಿದೆ.

ಈ ಶಾಲೆಯಲ್ಲಿ ಡೊನೇಷನ್ ಇರಲಿ ಫೀಸ್‌ನ ಮಾತೂ ಇಲ್ಲ. ಯೂನಿಫಾರಂ, ಶೂಸ್, ಪುಸ್ತಕದ ಹೊರೆ ಇಲ್ಲ. ಪುಸ್ತಕವನ್ನು ಶಾಲೆಯೇ ನೀಡುತ್ತದೆ. ಶಾಲೆಗೆ ಸೇರಲು ಮಗು

ತರಬೇಕಾದ್ದು ಗಿಡವೊಂದನ್ನು ಮಾತ್ರ. ತಾನು ತರುವ ಗಿಡವನ್ನು ಮಗು ತಾನೇ ಬೆಳಸಬೇಕು. ಗಿಡ ಬೆಳೆದಂತೆ ಮಗುವು ವಿಕಾಸಗೊಳ್ಳುತ್ತಾ ಹೋಗಬೇಕೆನ್ನುತ್ತಾರೆ ಮಾಲತಿಯವರು. ಶಾಲೆಗೆ ಸೇರಲು ವಯಸ್ಸಿನ ಮಿತಿ ಇಲ್ಲ. ಇಲ್ಲಿ ೧೪ನೆ ವಯಸ್ಸಿಗೆ ಶಾಲೆಗೆ ಸೇರಿದ ಉದಾಹರಣೆಯೂ ಉಂಟು.

ಬೆಳಗ್ಗೆ ಸುಮಾರು ೮.೩೦ರ ಹೊತ್ತಿಗೆ ಮಕ್ಕಳು ಶಾಲೆಗೆ ಬರುತ್ತಾರೆ. ಬಂದ ಕೂಡಲೆ ಆಟ ಆಡುತ್ತಾರೆ. ತಮ್ಮ ತಮ್ಮ ಗಿಡಗಳಿಗೆ ನೀರು ಹಾಕುತ್ತಾರೆ. ನಂತರ ಶಾಲೆಯ ಇತರ ಗಿಡಗಳಿಗೆ ನೀರು ಹಾಕುತ್ತಾರೆ. ಅವತ್ತಿನ time-table ಹಾಕುವುದು, ಶಾಲೆಯ ಕೋಣೆ, ಅಂಗಳ ಗುಡಿಸುವುದು, ಕುಡಿಯುವ ನೀರು ತುಂಬಿಡುವುದು - ಈ ಎಲ್ಲಾ ಕೆಲಸವನ್ನು ಮಕ್ಕಳು ಹಂಚಿಕೊಂಡು ಮಾಡುತ್ತಾರೆ. ನಂತರ ಮಕ್ಕಳೆ ಸೇರಿ ಗಂಜಿ ತಯಾರಿಸಿ ಕುಡಿಯುತ್ತಾರೆ. 9ಕ್ಕೆ ಬೆಲ್ ಆದ ನಂತರ ವಿವಿಧ ಭಾಷೆಯ ಹಾಡುಗಳನ್ನ ಹಾಡುತ್ತಾರೆ. ಶ್ಲೋಕಗಳು, ಮರಾಠಿ, ಹಿಂದಿ, ಕನ್ನಡ, ಫ್ರೆಂಚ್, ಜರ್ಮನಿ ಭಾಷೆಯ ಹಾಡುಗಳನ್ನು ಹಾಡುತ್ತಾರೆ. ಹಾಡು ಭಾವಗೀತೆಯಾಗಿರಬಹುದು, ಜಾನಪದವಾಗಿರಬಹುದು, ಶಾಸ್ತ್ರೀಯವಾಗಿರಬಹುದು. ನಾವಿಬ್ಬರು ಸೇರಿ (ಶಿಕ್ಷಕರು, ಮಕ್ಕಳು) ಒಳ್ಳೆಯದನ್ನು, ಧೈರ್ಯವಾಗಿರೋದನ್ನ, ಸವಾಲಾಗಿರುವಂತಹ ಕೆಲಸವನ್ನು ಮಾಡೋಣ, ಕೆಟ್ಟದ್ದನ್ನ ತಡೆಯೋಣ, ನಾವು ವಿದ್ಯೆ ಕಲಿಯುತ್ತಿರುವುದು ಶಾಂತಿಗಾಗಿ ಎನ್ನುವ ಸಹನಾಭವತು..... ಶ್ಲೋಕವನ್ನು ನಿತ್ಯವೂ ಹಾಡುತ್ತಾರೆ. ಹಾಡುವುದು ಉತ್ಸಾಹ ನೀಡುತ್ತೆ. ಉತ್ಸಾಹವಿದ್ದರೆ ಕಲಿಯುವ ಆಸೆ ಬರುತ್ತೆ. ಶಿಸ್ತು ಹಾಡಿನ ಮೂಲಕವೇ ಪ್ರಾರಂಭವಾಗುತ್ತೆ. ಎಲ್ಲರೂ ಒಟ್ಟಿಗೆ ಹಾಡುವುದು ಶಿಸ್ತನ್ನು ಕಲಿಸುತ್ತೆ. ಹಾಡು ಭಾಷಣಕ್ಕಿಂತ ಪರಿಣಾಮಕಾರಿ ಎಂಬ ನಂಬಿಕೆ ಶಾಲೆಯವರದು.

ಬೇರೆ ಶಾಲೆಗಳಂತೆ ಇಲ್ಲಿಯೂ ಗಣಿತ, ಸಮಾಜ, ವಿಜ್ಞಾನ,ಕನ್ನಡ, ಹಿಂದಿ, ಇಂಗ್ಲೀಷ್ ಕಲಿಸಲಾಗುತ್ತದೆ. ಕಲಿಸುವ ವಿಧಾನ ಮಾತ್ರ ಬೇರೆ ಶಾಲೆಗಳಿಗಿಂತ ಭಿನ್ನ. ಮಕ್ಕಳು ಯಾವ ಮಟ್ಟದಲ್ಲಿರುತ್ತಾರೊ ಅದಕ್ಕೆ ಸರಿಹೊಂದುವಂತೆ ಕಲಿಸಿ ಕೊಡಲಾಗುತ್ತದೆ. ನಿರ್ಧಿಷ್ಟವಾಗಿ ಇಷ್ಟು ಪಾಠವನ್ನು ಇಂತಿಷ್ಟೇ ಸಮಯದಲ್ಲಿ ಮುಗಿಸಿಬಿಡುವ ಒತ್ತಡ ಈ ಶಾಲೆಯಲ್ಲಿ ಇಲ್ಲ. ಇಷ್ಟು ಸಮಯದಲ್ಲಿ ಮುಗಿಸಬೇಕು ಎನ್ನುವುದಕ್ಕಿಂತ ಮಗುವಿಗೆ ನಾವು ಕಲಿಸುತ್ತಿರುವುದು ಅರ್ಥವಾಗಬೇಕು, ಅದಕ್ಕೆ ಅರಿವು ಮೂಡಬೇಕು ಅನ್ನೋದಕ್ಕೆ ಹೆಚ್ಚು ಒತ್ತು ನೀಡಲಾಗುತ್ತದೆ. ಮಗುವಿಗೆ ಜ್ಞಾನ ಮೂಡಬೇಕು. ಈ ಜ್ಞಾನ ಮಗುವನ್ನು ಒಂದು ಹಂತಕ್ಕೆ ತಲುಪಿಸುತ್ತೆ ಅದರಾಚೆಯದು ವಿಜ್ಞಾನ. ವಿಜ್ಞಾನವೆಂದರೆ ಜ್ಞಾನದ ಪರಿಧಿಯನ್ನು ದಾಟಿ ಹೋಗುವುದು. ಮಕ್ಕಳಿಗೆ ಕಲಿಕೆ ಭಯ ಹುಟ್ಟಿಸಬಾರದು. ಅವರ ಬಾಲ್ಯ ಸಂತೋಷದಾಯಕವಾಗಿರಬೇಕು. ಮುಕ್ತ ವಾತಾವರಣವಿದ್ದಾಗ ಮಕ್ಕಳು ಉತ್ಸಾಹದಿಂದ ಕಲಿಯುತ್ತಾರೆ. ಮಗುವಿಗೆ ಹಿಂಸೆ ಯಾಗದ ರೀತಿ ಮಗುವಿನ ಕಲಿಕೆಯ ಮಟ್ಟವನ್ನ ಹೆಚ್ಚಿಸಬೇಕು. ಪ್ರತಿಯೊಂದು ಮಗುವೂ ಒಂದು ಬೀಜದ ಹಾಗೆ ತನ್ನದೆ ಸತ್ವದೊಂದಿಗೆ ಹುಟ್ಟಿರುತ್ತದೆ. ಮಗು ಒಳಗಡೆ ಇರುವುದನ್ನ ಅರಳಲು ವಾತಾವರಣ ಕಲ್ಪಿಸಿಕೊಡುವುದಷ್ಟೆ ಶಿಕ್ಷಕರ ಕೆಲಸ. ಮಗುವಿನ ವಿಕಾಸಕ್ಕೆ ಅಡ್ಡಿ ಮಾಡ್ದೆ ಇದ್ರೆ ಸಾಕು. ಶಿಕ್ಷಕರು ತೋಟಗಾರರ ತರ. ತೋಟಗಾರ ಒಂದು ಗಿಡ ಬೆಳೆಯೋದಕ್ಕೆ ಬೇಕಾದ ಅವಶ್ಯಕತೆಗಳನ್ನು ಒದಗಿಸುವಂತೆ ಶಿಕ್ಷಕರು ಮಗುವನ್ನು ಬೆಳೆಯಲು ಅವಕಾಶ ನೀಡಬೇಕು. ಇಂತಹ ನಂಬಿಕೆಗಳು ನಿಜವಾಗಿರೋದನ್ನ ಈ ಶಾಲೆಯ ಮಕ್ಕಳನ್ನ ನೋಡಿದರೆ ತಿಳಿಯುತ್ತದೆ. ಮಕ್ಕಳು ನಿರ್ಭೀತಿಯಿಂದ, ಉತ್ಸಾಹದಿಂದ ಶಾಲೆಯ ಪ್ರತಿಯೊಂದು ಚಟುವಟಿಕೆಯಲ್ಲೂ ಪಾಲ್ಗೊಳ್ಳುತ್ತಾರೆ.

ಪಠ್ಯಪುಸ್ತಕಗಳನ್ನಷ್ಟೆ ಕಲಿಯದೆ ಮಡಿಕೆ ಮಾಡುವುದು, ಹೊಲಿಗೆ, ಮರಗೆಲಸ, ನಾಟಕ, ಹಾಡೂ, ಕಟ್ಟಡ ಕೆಲಸ, ತೋಟಗಾರಿಕೆ, ಕೈಕೆಲಸ ಎಲ್ಲವನ್ನು ಕಲಿಯುತ್ತಾರೆ. ಇಲ್ಲಿ vocational educationalಅನ್ನು, accademic educationಅನ್ನು ಬೇರೆ ಬೇರೆ ಎಂದು ಪರಿಗಣಿಸುವುದಿಲ್ಲ. ಗಣಿತವನ್ನು ಮಾಡುವಾಗಿನ ಆಸಕ್ತಿ ಮಡಿಕೆ ಮಾಡುವಾಗಲು ಇರುತ್ತದೆ. ಮಗುವಿನ ಆಸಕ್ತಿಯನ್ನು ಗುರುತಿಸಿ ಪ್ರೋತ್ಸಾಹ ನೀಡಲಾಗುತ್ತದೆ. ಯಾವ ದುಡಿಮೆಯನ್ನೂ ಗೌರವಿಸ ಬೇಕೆಂಬುದನ್ನು ಕಲಿಸಲಾಗುತ್ತದೆ.

ಈ ಶಾಲೆಯಲ್ಲಿ ಮಗು ಹೂ, ಎಲೆ, ಕಡ್ಡಿ, ಕಲ್ಲಿನ ಮೂಲಕ ಎಣಿಸುವುದನ್ನು ಕಲಿಯುತ್ತದೆ. ವಿಜ್ಞಾನದ ಪ್ರಯೋಗಗಳನ್ನ, ಚಾರ್ಟ್‌ಗಳನ್ನ ತಾವೇ ಮಾಡುತ್ತಾರೆ. ಗಣಪತಿ ಹಬ್ಬ ಬಂದಾಗ ತಾವೇ ಗಣಪತಿಯನ್ನು ಮಾಡಿ ಒಟ್ಟಿಗೆ ಕಲೆತು ಹಬ್ಬ ಆಚರಿಸುತ್ತಾರೆ. ಹಬ್ಬ ಮಾಡಿದ್ದನ್ನು ವಿವರಿಸಿ ತಮಗೆ ಇಷ್ಟವಾದವರಿಗೆ ಬರೆಯುವ ಮೂಲಕ ಪತ್ರ ಬರೆಯುವುದನ್ನು ಕಲಿಯುತ್ತಾರೆ.

ಈ ಶಾಲೆಗೆ ಬರುವ ಮಕ್ಕಳನ್ನು ಅವರ ಕಲಿಕೆಯ ಮಟ್ಟ ನೋಡಿಕೊಂಡು 7ನೇ ತರಗತಿ ಮತ್ತು 10ನೇ ತರಗತಿಯ ಪರೀಕ್ಷೆಗೆ ತಯಾರು ಮಾಡಲಾಗುತ್ತದೆ. ಪುಸ್ತಕದ ಹೊರೆ ಇಲ್ಲದೆ, ಶಿಕ್ಷಕರು, home work, testನ ಭೀತಿ ಇಲ್ಲದೆ ಈ ಶಾಲೆಯ ಮಕ್ಕಳು 7ನೇ ಹಾಗು 10ನೇ ತರಗತಿಯಲ್ಲಿ

ಪಾಸಾಗಿದ್ದಾರೆ. S.S.L.C. ಆದ ನಂತರ ಕೆಲಸ ಮಾಡುವುದಕ್ಕೆ ಹೆಚ್ಚು ಒತ್ತು ನೀಡಲಾಗುತ್ತದೆ. B.A., M.A. ಮಾಡಿ ಕೆಲಸಕ್ಕೆ ಕಾಯುವುದಕ್ಕಿಂತ S.S.L.C. ಆದ ಕೂಡಲೇ ಸ್ವಾವಲಂಬಿಗಳಾದಲ್ಲಿ ಮುಂದಿನ ಓದನ್ನು ಖಾಸಗಿಯಾಗಿ, Correspondenceನಲ್ಲಿ ಮಾಡಿಕೊಳ್ಳಬಹುದು ಎನ್ನುತ್ತಾರೆ ಮಾಲತಿ. ಈ ಶಾಲೆ ಮಕ್ಕಳು S.S.L.C. ಸರ್ಟಿಫಿಕೇಟ್ ಜೊತೆಗೆ ಅನೇಕ ಕೌಶಲ್ಯಗಳನ್ನು ಕಲಿಯುವುದರಿಂದ ಕೆಲಸಕ್ಕೆ ತೊಂದರೆಯಾಗುವುದಿಲ್ಲ. ಒಟ್ಟಿನಲ್ಲಿ ಶಿಕ್ಷಕರು ಮಕ್ಕಳೇ ಕಟ್ಟಿರುವ ಶಾಲೆಯನ್ನು, ಬೆಳೆಸಿರುವ ಹಸಿರನ್ನು ನೋಡಿದಾಗ ಆದರ್ಶ ಇಲ್ಲಿ ಬರಿ ಮಾತಾಗದೆ ಕೈಕಾಲು ಜೀವ ಪಡೆದು ಉಸಿರಾಡುತ್ತಿರುವ ಅನುಭವವಾಗುತ್ತದೆ.

*- ಸರಸ್ವತಿ ದು.*

## ವಿಕಾಸನ ಕುರಿತು ಮಕ್ಕಳು ಏನನ್ನುತ್ತಾರೆ?

ಈ ಶಾಲೆಯ ಹೆಸರು ವಿಕಾಸನ. ಇಲ್ಲಿ ಎಲ್ಲಾ ತರ ಭಾಷೆಗಳನ್ನು ಕಲಿಸುತ್ತಾರೆ. ಇಲ್ಲಿ ತುಂಬಾ ತುಂಬಾ ಮರಗಳಿವೆ. ಇಲ್ಲಿ ಕಥೆ ಮತ್ತು ನಾಟಕ ಆಡಿಸುತ್ತಾರೆ, ಇಲ್ಲಿ ಮೂವತ್ತೈದು ಮಕ್ಕಳು ಓದುತ್ತಿದ್ದಾರೆ, ನಾನು ಆ ಶಾಲೆಗೆ ಸೇರಿ ಮೂರು ವರ್ಷ ಆಗಿದೆ. ನಮ್ಮ ಶಾಲೆಯಲ್ಲಿ ವಾತಾವರಣ ಸ್ವಚ್ಛವಾಗಿದೆ. ನಮ್ಮ ಶಾಲೆಯಲ್ಲಿ ಆಟದ ಜೊತೆಗೆ ಪಾಠವನ್ನು ಹೇಳಿಕೊಡುತ್ತಾರೆ.

*- ಶಶಿ*



ನಮ್ಮ ಶಾಲೆಯ ಹೆಸರು ವಿಕಾಸನ. ನಾನು ಈ ಶಾಲೆಗೆ ಆರು ವರ್ಷದಿಂದ ಬರುತ್ತಿರುವೆ. ಈ ಶಾಲೆಯಲ್ಲಿ ಮೇಲು, ಕೀಳು ಇಲ್ಲವೇ ಇಲ್ಲ. ನಾವು ನಮ್ಮ ಗುರುಗಳನ್ನು ಅಕ್ಕ ಎಂದು ಕರೆಯುತ್ತೇವೆ. ಈ ಶಾಲೆ ನನಗೆ ತುಂಬ ಇಷ್ಟ. ನಮ್ಮ ಶಾಲೆಯಲ್ಲಿ ನಮ್ಮ ಕೆಲಸ ನಾವೇ ಮಾಡಿಕೊಳ್ಳಬೇಕು. ಮತ್ತೆ ನಮ್ಮ ಶಾಲೆಯಲ್ಲಿ ಈಜು, ಮರ ಹೂಣುವುದು ಇನ್ನು ಮುಂತಾದುವುಗಳನ್ನು ಹೇಳುಕೊಡುತ್ತಾರೆ.

*- ಲಕ್ಷ್ಮೀ*



ನನಗಂತು ತುಂಬ ಇಷ್ಟವಾಯಿತು. ಏಕೆಂದರೆ, ಇಲ್ಲಿ ಎಲ್ಲ ತರಹ ವಿದ್ಯಾಭ್ಯಾಸವು ಇದೆ. ಆಮೇಲೆ ನಾವು ಎಲ್ಲೆ ಹೊರಗಡೆ ಹೋದರೆ ನಮ್ಮ ಕಾಲು ಮೇಲೆ ನಿಂತು ನಾವು ಸ್ವಂತ ಉದ್ಯೋಗ ಮಾಡಬಹುದು. ಎಲ್ಲ ತರಹ ಕೈಕೆಲಸವು ಕಲಿತಿರುತ್ತೇವೆ. ಅಷ್ಟೇ ಅಲ್ಲ, ಈ ಶಾಲೆಯನ್ನು ಬಿಟ್ಟು ಹೋಗುವುದಕ್ಕೆ ಮನಸೇ ಬರುವುದಿಲ್ಲ.

*- ರವಿ*

ನನಗೆ ವಿಕಾಸನ ಶಾಲೆಗೆ ಬರುವುದಕ್ಕೆ ತುಂಬ ಇಷ್ಟ. ಏಕೆಂದರೆ ಇಲ್ಲಿ ಎಲ್ಲ ತರಹ ವಿದ್ಯಾಭ್ಯಾಸವು ದೊರಕುತ್ತದೆ. ಎಲ್ಲ ತರಹ ಕೈಕೆಲಸವನ್ನು ಮಾಡಿಸುತ್ತಾರೆ. ನಮಗೆ ಗುರುಗಳನ್ನು ಕಂಡರೆ ತುಂಬ ಇಷ್ಟ. ಏಕೆಂದರೆ ಅವರು ಆಂಗ್ಲ ಭಾಷೆ, ಕನ್ನಡ, ವಿಜ್ಞಾನ, ಸಮಾಜ, ಹಿಂದಿ ಮತ್ತು ಗಣಿತ ಒಬ್ಬರೇ ಹೇಳಿಕೊಡುತ್ತಾರೆ.

ನಮ್ಮ ಶಾಲೆಯಲ್ಲಿ ಕನ್ನಡ ಮಾಧ್ಯಮ ಅಥವಾ ಆಂಗ್ಲ ಮಾಧ್ಯಮ ಎನ್ನುವುದು ಇಲ್ಲ. ನಮ್ಮ ಶಾಲೆಯಲ್ಲಿ ಮೂರು ತರಹ ಭಾಷೆಯನ್ನು ಕಲಿಸುತ್ತಾರೆ. ಆಂಗ್ಲ, ಕನ್ನಡ, ಹಿಂದಿ. ನಮ್ಮ ಶಾಲೆಯಲ್ಲಿ ಓದುವುದೊಂದೇ ಅಲ್ಲದೆ ಎಲ್ಲಾ ತರಹ ವಿದ್ಯಾಭ್ಯಾಸವನ್ನು ಕಲಿಸುತ್ತಾರೆ. ಅದರಿಂದ ನನಗೆ ಇಲ್ಲಿ ಬರುವುದಕ್ಕೆ ತುಂಬ ಇಷ್ಟ.

*- ಮಾಲ*



ನಮ್ಮ ಶಾಲೆಯು ಹೆಸರು ವಿಕಾಸನ. ಈ ಶಾಲೆಯಲ್ಲಿ ಎಲ್ಲಾ ಕಲಿಸುತ್ತಾರೆ. ನನಗೆ ಈ ಶಾಲೆ ಇಷ್ಟವಾಯಿತು. ಈ ಶಾಲೆಯಲ್ಲಿ ಗಿಡ, ಮರಗಳು ಬಹಳ ಇವೆ. ನಾನು ಈ ಶಾಲೆಗೆ ಸೇರಿ ಆರು ವರ್ಷವಾಗಿತ್ತು, ನಾವೂ ಗುರುಗಳನ್ನು ಅಕ್ಕ ಎಂದು ಕರೆಯುತ್ತೇವೆ, ನಮ್ಮ ಶಾಲೆಯಲ್ಲಿ ಪರೀಕ್ಷೆ ಇರುವುದಿಲ್ಲ, ಪರೀಕ್ಷೆ ಯಾವಾಗ ಎಂದರೆ? ಏಳನೇ ತರಗತಿಗೆ ಮತ್ತು ಹತ್ತನೆ ತರಗತಿಗೆ ಪರೀಕ್ಷೆ ನಡೆಯುತ್ತದೆ.

*- ಶ್ವೇತ*



ಇದು ಮರಗಳೆ ತುಂಬಿರುವ ಶಾಲೆ. ಇಲ್ಲಿ ತರಗತಿ ಮೂರಿವೆ, ಅಕ್ಕನ ಮನೆಯಿದೆ. ಇಲ್ಲಿ ಸೇರಿರುವ ಮಕ್ಕಳು ಬಿಡಲು ಮನಸ್ಸಿರುವುದಿಲ್ಲ. ನನಗಂತೂ ಬಿಡಲೂ ಮನಸ್ಸಿಲ್ಲ.

ಮುಂದಿನ ಕಾಲದಲ್ಲಿ ನಮ್ಮ ಕಾಲ ಮೇಲೆ ನಿಲ್ಲಬಹುದು. ಏಕೆಂದರೆ ಇಲ್ಲಿ ಜೀವನಕ್ಕೆ ಬೇಕಾದ ಕೈಕೆಲಸಗಳು ಹೇಳಿ ಕೊಡುತ್ತಾರೆ. ಇಲ್ಲಿನ ಅಕ್ಕಂದಿರು ಶಾಂತವಾಗಿರುತ್ತಾರೆ. ಇಲ್ಲಿ ಮಾಧ್ಯಮಗಳು ಇಲ್ಲ.

*- ನಾಗವೇಣಿ*



ನಾನು ಈ ಶಾಲೆಗೆ ಬರುವುದಕ್ಕೆ ತುಂಬ ಇಷ್ಟ. ಇಲ್ಲಿ ಚಿಕ್ಕವರನ್ನು, ದೊಡ್ಡವರನ್ನು ಜೊತೆಯಲ್ಲೇ ಸೇರಿಸಿಕೊಂಡು ಎಲ್ಲಾ ಕೆಲಸ ಮಾಡುತ್ತೇವೆ. ಎಲ್ಲರು ಜೊತೆಯಲ್ಲಿ ಹಾಡು ಹಾಡುತ್ತೇವೆ, ಆಟವಾಡುವುದು, ಕೆಲಸ ಮಾಡುವುದು ಎಲ್ಲಾ ಮಾಡುತ್ತೇವೆ. ಇಲ್ಲಿ ಮರಗಳಿಂದ ಹಸಿರು ತುಂಬಿದೆ. ಬೇಸಿಗೆಯ ಕಾಲದಲ್ಲಿ ಹಕ್ಕಿಗಳು ಇವೆ.

*- ಆಶಾ*

## ವಿಕಾಸನದ ಹುಟ್ಟಿಗೆ ಕಾರಣರಾದ ಮಾಲತಿಯವರನ್ನು ಮಾತನಾಡಿಸಿದಾಗ......

ನಾನು ಮಾಮೂಲಿ ಸರ್ಕಾರಿ ಶಾಲೆಯಲ್ಲೇ ಓದಿದ್ದು. ನಮ್ಮ ತಂದೆದು ವರ್ಗವಾಗೋ ಕೆಲಸವಾಗಿದ್ದರಿಂದ ಶಿವನ ಸಮುದ್ರ, ಪಾವಗಡ, ಮೈಸೂರು ಕಡೆಲ್ಲೆಲ್ಲ ಓದಿದೆ. ನಮ್ಮ ಊರು ಮೈಸೂರು. S.S.L.C. ಆದ್ಮೇಲೆ P.U.C. ಸೇರ್ದೆ. ಮನೆಯಲ್ಲಿ ಎಲ್ಲರು Science ತಗೋ ಅಂದಿದ್ದಕ್ಕೆ Science ತಗೊಂಡೆ. Scienceನಲ್ಲಿ ಆಸಕ್ತಿ ಇಲ್ಲದಿದ್ದಕ್ಕೆ P.U.C. ಆದ್ಮೇಲೆ B.A.ಗೆ ಬದಲಾಯಿಸಿಕೊಂಡೆ. ಅಲ್ಲಿ ನನಗೆ ತುಂಬಾ ಒಳ್ಳೆಯ ಉಪಾಧ್ಯಾಯರಿದ್ರು. ಸಾಹಿತ್ಯದ ಸಂಪರ್ಕ ಹೆಚ್ಚಾಯ್ತು. ಸಾಹಿತ್ಯ ಜೀವನವನ್ನು ಪ್ರತಿಬಿಂಬಿಸುತ್ತೆ. ಸಾಹಿತ್ಯದ ಓದಿನಿಂದಾಗಿ ಆಳವಾಗಿ ಯೋಚಿಸೋದನ್ನ ಕಲಿತೆ, ಜೀವನದ ಮಟ್ಟವೆ ಸಾಹಿತ್ಯದಿಂದ ಬದಲಾಯ್ತು.

ನನಗೆ ಮೊದಲಿಂದ್ಲೂ ಕಲಿಕೆ ಅಂದ್ರೆ, ಪಾಠ ಮಾಡೋದು ಅಂದ್ರೆ ತುಂಬಾ ಇಷ್ಟ. ಆದ್ರೆ ಶಾಲೇಲಿ ಕಲಿಸ್ತಾ ಇದ್ದಿದ್ದು ಖುಷಿಯಾಗ್ತ ಇರ್ಲಿಲ್ಲ. B.A. ಮಾಡಿದ ಕೂಡಲೆ ಮೈಸೂರಿನ ಶಾಲೆಯೊಂದರಲ್ಲಿ ಕನ್ನಡ ಟೀಚರ್ ಆಗಿ ಕೆಲ್ಸ ಸಿಗ್ತು. ನಾನು ತುಂಬಾ ಆಸಕ್ತಿಯಿಂದ ಪಾಠ ಮಾಡ್ತಿದ್ದೆ. ಲೈಬ್ರರಿಯನ್ನು ಹೆಚ್ಚು ಉಪಯೋಗಿಸ್ತಾ ಇದ್ದೆ. ಮಕ್ಕಳಿಗೂ ಲೈಬ್ರರಿ ಉಪಯೋಗಿಸಿ ಅಂತ ಹೇಳ್ತಾ ಇದ್ದೆ. ಮಕ್ಕಳ ಜೊತೇಲೆ ಆಟ ಆಡ್ತಾ ಇದ್ದೆ. ಅವರೊಂದಿಗೆ ಹೆಚ್ಚು ಒಡನಾಡುತ್ತಿದ್ದೆ. ಮಕ್ಕಳೂ ನನ್ನ ಹಿಂದೆ ಸುತ್ತೋರು. ಆಗೆಲ್ಲ ಬೇರೆಯವರು ಅದೆಲ್ಲ ಸರಿ ಇಲ್ಲ ಅನ್ನೋರು. ಹಾಗಾಗಿ ಶಾಲೆ ಬಿಟ್ಟು M.A. ಮಾಡೋದಕ್ಕೆ ಶುರುಮಾಡ್ದೆ. ನಾನು ಮೊದಲನೆ ವರ್ಷ ಮುಗಿಸಿದ ಮೇಲೆ ಒಂದು ಜಾಹೀರಾತು ನೋಡಿದೆ "ಶಿಕ್ಷಕರು ಬೇಕು ತರಬೇತಿ ಆಗಿರಬಾರ್ದು" ಅಂತ ಆಶ್ಚರ್ಯ ಆಯ್ತು. ನನಗೆ ತರಬೇತಿ ಬಗ್ಗೆ ಹಲವಾರು ಪ್ರಶ್ನೆಗಳಿದ್ದವು. ತರಬೇತಿಯಲ್ಲಿ ನಾವು ಕಲಿತದ್ದನ್ನು ಪ್ರಯೋಗಿಸೊದಕ್ಕೆ ಆಗದೆ ಇದ್‌ಮೇಲೆ, ತರಬೇತಿ ಪಡೆದ ಮೇಲೂ ನಮಗೆ ಇಷ್ಟಬಂದಂಗೆ ನಾವು ಪಾಠ ಮಾಡೋದಾದ್ರೆ ತರಬೇತಿ ಯಾಕ್ ಬೇಕು ಅನ್ನಿಸೋದು. ಜಾಹೀರಾತು ನೋಡಿದ ಮೇಲೆ ಡೇವಿಡ್ ಅವರನ್ನು ಭೇಟಿ ಮಾಡಿ ಅವರ ಹತ್ರ 2 ವರ್ಷ ತರಬೇತಿ ಪಡಕೊಂಡೆ. ಆಗ್ಲೆ ನನಗೆ ತರಬೇತಿಯ ಮೌಲ್ಯ ಗೊತ್ತಾಗಿದ್ದು. ಅವರಿಂದ ನಾನು ತುಂಬಾ ಕಲಿತೆ. ನಾನು ಕಲ್ತಿದನ್ನೆಲ್ಲ ಮರೆತು ಹೊಸದಾಗಿ ಅವರ ಹತ್ರ ಕಲಿತೆ. ಅದ್ದೊಂದು ರೀತಿ ಸ್ವ-ತರಬೇತಿ ತರ.

ಶಾಲೆನಲ್ಲಿ ಮಕ್ಕಳು ಜಾಸ್ತಿ ಇದ್ರೆ ಎಲ್ಲಾ ಮಕ್ಕಳಿಗೂ ಗಮನ ಕೊಡೋದು ಸಾಧ್ಯವಿಲ್ಲ. ಬರುವ ಮಕ್ಕಳ ಬುದ್ಧಿಶಕ್ತಿಯ ಮಟ್ಟ ಬೇರೆಬೇರೆ ಇರುತ್ತೆ. ಕಮ್ಮಿ ಮಕ್ಕಳಿದ್ದಾಗ ಅವುಗಳ ಬುದ್ಧಿಮಟ್ಟಕ್ಕೆ ಅನುಗುಣವಾಗಿ ಗಮನ ಕೊಡೋದು ಸಾಧ್ಯವಾಗುತ್ತೆ. ಒಬ್ಬ ಶಿಕ್ಷಕ ೨೦ ಜನ ಮಕ್ಕಳನ್ನ ನೋಡಿಕೊಳ್ಳಬಹುದು. ನಮ್ಮ ಶಾಲೆಯಲ್ಲಿ ಆಡಳಿತವನ್ನು ಶಿಕ್ಷಕರೇ ನೋಡಿಕೊಳ್ಳುತ್ತಾರೆ. ನಾವೆ accountantಗಳು, ನಾವೆ typist, ನಾವೇ ಜವಾನರು. ಡೇವಿಡ್ ಹೇಳ್ತಾ ಇದ್ರು. ಆಡಳಿತಕ್ಕೆ ಅಗತ್ಯಕ್ಕಿಂತ ಹೆಚ್ಚು ಒತ್ತು ನೀಡಬಾರದು. ಶಾಲೆ ಕಟ್ಟಡ ಸರಳವಾಗಿರಬೇಕು. ಕಟ್ಟಡಕ್ಕೆ ವ್ಯಯಿಸುವುದನ್ನು ಪುಸ್ತಕಕ್ಕೆ ವ್ಯಯಿಸು. paperwork ಕಮ್ಮಿ ಮಾಡಿಕೊಂಡು ಮಕ್ಕಳಿಗೆ ಹೆಚ್ಚು ಸಮಯ ಕೊಡಿ ಅಂತ ಹೇಳ್ತಾ ಇದ್ರು. ಯಾರೆ, ಯಾವ ಹಂತದಲ್ಲಿ ಬರಲಿ ಸೇರಿಸಿಕೊಂಡು ಕಲಿಯುವ ಉತ್ತಮ ವಾತಾವರಣ ನೀಡಬೇಕು. ಮಗು ಶಾಲೆಯಲ್ಲಿ ಜೀವನ ಮಾಡ್ತ ಇರುತ್ತೆ. ನಾವು ಬರೀ ಬೋಧಿಸುವ ಬದಲು ಮೌನವಾಗಿದ್ದು ಅದರ ಬೆಳವಣಿಗೆಗೆ ಅವಕಾಶ ಮಾಡಿಕೊಡಬೇಕು ಜೊತೆಗೆ ತಾನೂ ಬೆಳೀತಾ ಹೋಗಬೇಕು.

ಮಗು ಶಾಲೆಗೆ ಬಂದಾಗ ನಾನು ತರೋದಕ್ಕೆ ಹೇಳೋದು ಗಿಡವನ್ನು ಮಾತ್ರ. ನಾವು ಯಾವಗ್ಲು ಪ್ರಕೃತಿಯಿಂದ

ಪಡಕೊಳ್ಳುವುದನ್ನಷ್ಟೆ ನೋಡ್ತಿವಿ. ವಾಪಸ್ಸು ಕೊಡೋದು ಇರ್ಬೇಕು. ಗಿಡವನ್ನು ತಂದ ಮಗು ತಾನೇ ಗಿಡವನ್ನು ಬೆಳಸುತ್ತ ಬೆಳೀಬೇಕು.

ಉತ್ತಮ ಶಿಕ್ಷಕರಾಗೋದಕ್ಕೆ ಸಾಕಷ್ಟು ಸಿದ್ಧತೆ ಬೇಕು. ನಾವು ಯಾವಾಗ್ಲು ಎಲ್ರೂ ಮದ್ವೆ ಮಾಡ್ಕೋತಾರೆ ಅಂತ ನಾವು ಮದ್ವೆ ಮಾಡ್ಕೋಳೋದು, ಎಲ್ರು ಕೆಲ್ಸಕ್ಕೆ ಸೇರ್ತಾರೆ ಅಂತ ನಾವೂ ಸೇರೋದು, Teacher ಕೆಲ್ಸ ಸುಲಭ ಅಂಥ teacher ಆಗೋದು ಮಾಡ್ತ ಇರ್ತೀವಿ. ಆದ್ರೆ ಯಾವುದ್ದಕ್ಕಾದ್ರು ನಾವು ಅಭ್ಯಾಸ ಮಾಡಬೇಕಾಗುತ್ತೆ. ನಾವು ಶಿಕ್ಷಕರಾಗಬೇಕು ಅಂದ್ರೆ ಅದಕ್ಕೆ ತಕ್ಕನಾಗಿ ಮನಸ್ಸನ್ನು ಪರಿವರ್ತನೆ ಮಾಡ್ಕೊಬೇಕು, ಪಕ್ವಮಾಡ್ಕೋಬೇಕು. ಮನಸ್ಸನ್ನು ಅದಕ್ಕೆ ಸಿದ್ಧಪಡಿಸ್ಕೊ ಬೇಕು. ಇದೆಲ್ಲವನ್ನು ನಾನು ಡೇವಿಡ್ ಅವರಿಂದ ಕಲಿತೆ. ತರಬೇತಿ ಆದ ಮೇಲೆ ಮೈಸೂರಿನಲ್ಲಿ ಶಾಲೆ ಆರಂಭಿಸಬೇಕು ಅಂತ ಇಷ್ಟ ಇತ್ತು. ಆದ್ರೆ ಡೇವಿಡ್ ಅವರ ಸ್ನೇಹಿತರಾದ ಲೀಲಾ ಅವರು 1/2 ಎಕರೆ ಜಾಗವನ್ನು ಕೊಟ್ಟಿದ್ದಕ್ಕೆ ಇಲ್ಲಿ ಶಾಲೆ ಪ್ರಾರಂಭಿಸಿದೆ. ಶಾಲೆ ಪ್ರಾರಂಭಿಸೋಕೆ ಡೇವಿಡ್ ಸಹಾಯ ಮಾಡಿದ್ರು. ನನ್ನೊಂದಿಗೆ ತರಬೇತಿ ಪಡೆದಿದ್ದ ಸ್ನೇಹಿತರು ಶಾಲೆಯ ಪ್ರಾರಂಭದ ೬ ತಿಂಗಳು ನನ್ನೊಟ್ಟಿಗೆ ಇದ್ರು. ಶುರುವಿನಲ್ಲಿ ಸುತ್ತಮುತ್ತಲಿನ ಹಳ್ಳಿಗೆ ಹೋಗಿ ಶಾಲೆ ಬಗ್ಗೆ ಹೇಳಿ 10 ವರ್ಷ

*ಡೇವಿಡ್ ಹಾರ್ಸ್‌ಬರೊ : ಮೂಲತಃ ಇಂಗ್ಲೆಂಡ್‌ನವರಾದ ಇವರು 2ನೇ ಮಹಾಯುದ್ಧದ ಸಂದರ್ಭದಲ್ಲಿ ಬರ್ಮಾಗೆ ಬಂದಾಗ ರವೀಂದ್ರನಾಥ ಟಾಗೋರ್ ಮತ್ತವರ ಶಾಂತಿನಿಕೇತನದ ಬಗ್ಗೆ ಕೇಳಿ, ಭಾರತಕ್ಕೆ ಬರಬೇಕೆಂದುಕೊಂಡರು. ನಂತರ ಭಾರತಕ್ಕೆ ಬರಬೇಕೆಂದರೆ ಸಂಸ್ಕೃತ ಗೊತ್ತಿರಲೇಬೇಕೆಂದುಕೊಂಡು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಆನರ್ಸ್ ಮಾಡಿ ಭಾರತಕ್ಕೆ ಬಂದರು. ಶಿಕ್ಷಣದ ಬಗ್ಗೆ ಆಸಕ್ತಿ ಇದ್ದ ಅವರು ಸರಳವಾದ, ಆಸಕ್ತಿಯುತವಾದ ಕಲಿಕಾ ವಿಧಾನವನ್ನು ಹುಟ್ಟುಹಾಕಿದರು. ತಮ್ಮದೇ ಶಾಲೆ ನಡೆಸುವ ಮೊದಲು ಅವರು ಮೈಸೂರಿನ ರೀಜನಲ್ ಇನ್‌ಸ್ಟಿಟ್ಯೂಟ್ ಆಫ್ ಲ್ಯಾಂಗ್‌ವೇಜ್‌ನಲ್ಲಿ, ಬ್ರಿಟೀಷ್ ಕೌನ್ಸಿಲ್‌ನಲ್ಲಿ 'ರಿಶಿವ್ಯಾಲಿ ಶಾಲೆಯಲ್ಲಿ' ಸೇಂಟ್ ಫಿಲೋಮಿನಾದಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿ ಕೆಲಸ ಮಾಡಿದ್ದರು. ಕರ್ನಾಟಕ ಸರ್ಕಾರ ಅವರನ್ನು ಪಠ್ಯಪುಸ್ತಕದ ಕಮಿಟಿಗೆ ನಿರ್ದೇಶಕರಾಗಿ ನೇಮಿಸಿತ್ತು. ಮಕ್ಕಳಿಗಾಗಿ ಅವರು ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಅನೇಕ, ಸರಳ ಕಲಿಕಾ ಸಾಮಗ್ರಿಗಳನ್ನು ತಯಾರಿಸಿದ್ದಾರೆ. ಶಿಕ್ಷಕರಿಗೂ ಉತ್ತಮ ತರಬೇತಿ ನೀಡುತ್ತಿದ್ದರು, ಕಲಾವಿದ, ನಾಟಕಕಾರ, ತಬಲಾ ವಾದ್ಯಗಾರ, ಬಡಗಿ, ಭಾಷಾ ತಜ್ಞ ಹೀಗೆ ಅವರ ಆಸಕ್ತಿ ಹತ್ತು ಹಲವಾರು.*

*ತಾವಂದುಕೊಂಡಿದ್ದನ್ನು ಎಲ್ಲೂ ಪ್ರಯೋಗಿಸಲಾಗದ ಅತೃಪ್ತಿ ಅವರನ್ನು ತಮ್ಮದೇ ಪುಟ್ಟ ಶಾಲೆ ತೆರೆಯುವಂತೆ ಮಾಡಿತು. ಕೋಲಾರ ಜಿಲ್ಲೆಯ ರಾಯಲ್‌ಪಾಡು ಹಳ್ಳಿಯಲ್ಲಿ ನೀಲ್‌ಭಾಗ್ ಶಾಲೆಯನ್ನು ಪ್ರಾರಂಭಿಸಿದರು. ಈ ರೀತಿಯ ಶಾಲೆ ತೆರೆಯಲು ಆಸಕ್ತಿ ಇರುವವರಿಗಾಗಿ ಸಣ್ಣ ತರಬೇತಿ ಕೇಂದ್ರವನ್ನು ಸ್ಥಾಪಿಸಿದ್ದರು. ಕಲಿಕೆ ಆನಂದದಾಯಕವಾಗಿರಬೇಕೆಂಬುದು ಅವರ ನಂಬಿಕೆಯಾಗಿತ್ತು. ನೀಲ್‌ಬಾಗ್ ಶಾಲೆಯಲ್ಲಿ ಯಾರಾದರು, ಯಾವ ಹಂತದಲ್ಲಾದರೂ ಅವರಿಗೆ ಆಸಕ್ತಿ ಇದ್ದುದನ್ನು ಕಲಿಯಬಹುದು. ಅಲ್ಲಿ ಸ್ಪರ್ಧೆ, ಹೋಲಿಕೆಗಳಿಲ್ಲದೆ ಮಗು ತನ್ನದೇ ಗತಿಯಲ್ಲಿ ಕಲಿಯಲು ಅವಕಾಶವಿತ್ತು. ಪರೀಕ್ಷೆ-ಟೆಸ್ಟ್‌ಗಳ ಒತ್ತಡ, ಮಕ್ಕಳನ್ನು ಉತ್ತಮರು, ದಡ್ಡರೆಂದು ಗುರುತಿಸುವ ಅಂಕಪಟ್ಟಿ ಅಲ್ಲಿರಲಿಲ್ಲ. ಶಿಕ್ಷಕರಿಗೆಂದು ನೀಡಲಾಗುತ್ತಿದ್ದ 2 ವರ್ಷಗಳ ತರಬೇತಿಯಲ್ಲಿ ಸ್ವ-ಕಲಿಕೆಗೆ ಹೆಚ್ಚಿನ ಒತ್ತು ನೀಡಲಾಗುತ್ತಿತ್ತು.*

ನಿಮ್ಮ ಮಕ್ಕಳನ್ನು ಶಾಲೆಗೆ ಕಳಿಸಿ certificate, ಪರೀಕ್ಷೆ, uniform ಇಲ್ಲ, S.S.L.C, 7ನೇ ತರಗತಿ ಪರೀಕ್ಷೆಗೆ private ಆಗಿ ಕೂರಿಸ್ತೀವಿ, ಅಂತ ಹೇಳಿದೆವು. ತುಂಬಾ ಜನ ಬರೋಕೆ ಸಿದ್ಧವಾಗಿದ್ರು. ನಿಭಾಯಿಸೋಕೆ ಆಗೋಲ್ಲ ಅಂತ ಕಡಿಮೆ ಮಕ್ಕಳನ್ನು ತೊಗೊಂಡ್ವಿ. ಜನರ ಆಸಕ್ತಿ ಕಡಿಮೆ ಆಗಿ ಶಾಲೆ ಬಿಡಿಸೋದಕ್ಕೆ ಪ್ರಾರಂಭಿಸಿದರು. ಡೇವಿಡ್, ಲೀಲಾ ಇಬ್ರೂ ಬೇರೆ ದೇಶದವರಾಗಿದ್ದರಿಂದ ನಮ್ಮ ಮಕ್ಕಳನ್ನು ಇವರು foriegnಗೆ ಕಳಿಸ್ತಾರೆ ಅಂತ ಜನ ಅಂದ್ಕೊಂಡಿದ್ರು. ಇದೇನು 6 ತಿಂಗಳಾದ್ರು ಇವರು ಫಾರಿನ್‌ಗೆ ಕಳಿಸ್ಲಿಲ್ಲವಲ್ಲ ಅಂತ ಶಾಲೆ ಬಿಡಿಸೋಕೆ ಶುರುಮಾಡಿದ್ರು. ಕೊನೆಗೆ ಉಳ್ಕೊಂಡಿದ್ದು ಬರಿ 3 ಮಕ್ಕಳು ಮಾತ್ರ. ನನಗೆ ಭ್ರಮನಿರಸನವಾದಂಗೆ ಆಯ್ತು. ಉಳ್ಕೊಂಡಿದ್ದ ಮೂರು ಮಕ್ಕಳೆ ಇನ್ನೊಂದಷ್ಟು ಮಕ್ಕಳನ್ನು ಕರ್ಕೊಂಡು ಬಂದ್ರು. ಆಗ ಒಟ್ಟು ೧೨ ಮಕ್ಕಳಿದ್ರು. ನಾನು ಒಬ್ಬಳೆ ಎರಡು ವರ್ಷ ನಡೆಸ್ದೆ. ಕ್ರಮೇಣ ಸುತ್ತುಮುತ್ತಲಿನವರಿಗೆ ಶಾಲೆ ಬಗ್ಗೆ ವಿಶ್ವಾಸ ಬೆಳೀತು. ನನಗು ವಿಶ್ವಾಸ ಬೆಳಿತು. ನನಗೆ ಜನರಿಂದ ಯಾವ ರೀತಿ ತೊಂದ್ರೆನೂ ಬಂದಿಲ್ಲ. ಅವರಿಗೆ ನಾನು

ಯಾರು ಅಂತ ಗೊತ್ತಾದ ಮೇಲೆ, ನಾನು ಅವರಲ್ಲಿ ಒಬ್ಬಳು ಅಂತಾ ಗೊತ್ತಾದ ಮೇಲೆ ತೊಂದ್ರೆ ಬರೊಲ್ಲ.

ಶಾಲೆಗೆ ತಿಂಗಳಿಗೆ 15,000 ಖರ್ಚಾಗುತ್ತೆ. 25-30ಕ್ಕಿಂತ ಹೆಚ್ಚಿನ ಮಕ್ಕಳನ್ನ ತಗೋಳಲ್ಲ. ಶಾಲೆಗೆ Neelbagu trustನಿಂದ ಹಣ ಸಹಾಯ ಸಿಗುತ್ತೆ. ಡೇವಿಡ್ ಅವರು ಬರೆದಿರೊ ಪುಸ್ತಕದ Royaltyಯಿಂದ trust ನಡೆಯುತ್ತೆ. ಅಲ್ಲದೆ ವ್ಯಕ್ತಿಗಳಿಂದ, ಸಂಸ್ಥೆಗಳಿಂದ ಧನ ಸಹಾಯ ಸಿಗುತ್ತೆ.

ಈ ಶಾಲೆ ನನ್ನೊಬ್ಬಳಿಂದ ಆದದ್ದಲ್ಲ. ನಾನು ಮಕ್ಕಳು ಒಟ್ಟಿಗೆ ಸೇರಿ ಮಾಡಿದ್ದು. ಕಡಿಮೆ ಜನ ಇರೊದ್ರಿಂದ ನಾವೆಲ್ಲ ಒಂದು ಕುಟುಂಬದವರ ತರ ಇದೀವಿ. •

## ಶಾಲೆ, ಶಿಕ್ಷಕರನ್ನು ಕುರಿತ ಮಕ್ಕಳ ನಿರೀಕ್ಷೆಗಳು

*ಮಂಗಳೂರಿನಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ನಿರೀಕ್ಷೆಗಳು - ಕುರಿತು 'ಸಂಗತಿ' ಎಂಬ ಶಿಕ್ಷಣಕ್ಕೆ ಮೀಸಲಾದ ಪತ್ರಿಕೆಯವರು ಫೆಬ್ರವರಿ ತಿಂಗಳಿನಲ್ಲಿ ವಿಚಾರ ಸಂಕಿರಣವೊಂದನ್ನು ಏರ್ಪಡಿಸಿದ್ದರು. ಶಿಕ್ಷಕರು, ಮಕ್ಕಳು, ರಕ್ಷಕರು ಪರಸ್ಪರರಿಂದ ಏನನ್ನು ನಿರೀಕ್ಷಿಸುತ್ತಾರೆ ಎಂಬುದರ ಬಗ್ಗೆ ಸಂಗ್ರಹಿಸಿದ ಮಾಹಿತಿಯ ಆಧಾರದ ಮೇಲೆ ವಿಚಾರ ಸಂಕಿರಣವನ್ನು ನಡೆಸಲಾಯಿತು. ಆ ಮಾಹಿತಿಯಲ್ಲಿ ಶಿಕ್ಷಕರನ್ನು ಕುರಿತಂತೆ ಮಕ್ಕಳು ತಮ್ಮ ನಿರೀಕ್ಷೆಗಳನ್ನು ವ್ಯಕ್ತಪಡಿಸಿದ್ದಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಪ್ರಕಟಿಸಿದ್ದೇವೆ.*

"ಟೀಚರ್ ನನ್ನನ್ನು ಗುರುತಿಸಬೇಕು"

◇ ◇ ◇

"ಟೀಚರ್ ನನ್ನನ್ನು ಪ್ರೀತಿಯಿಂದ ಮಾತಾಡಿಸಬೇಕು"

◇ ◇ ◇

"ಕೆಲವೊಮ್ಮೆ ನಾವು ಏನು ತಪ್ಪು ಮಾಡಿದ್ದೇವೆ ಎಂದು ಅರ್ಥವಾಗುವುದಿಲ್ಲ. ಆಗ ಶಿಕ್ಷೆ ಯಾಕೆ ಎಂದು ನಮಗೆ ಹೇಳಬೇಕು"

◇ ◇ ◇

"ನಾವು ತಪ್ಪು ಮಾಡಿದಾಗ ಬುದ್ಧಿ ಕಲಿಸಲಿ ತೊಂದರೆ ಇಲ್ಲ. ಆದರೆ ಅವಮಾನಿಸುವುದು ಮತ್ತು ಹೀಯಾಳಿಸುವುದು ತುಂಬಾ ನೋವು ಕೊಡುತ್ತದೆ".

◇ ◇ ◇

"ಶಿಕ್ಷಕರು - ಹೆತ್ತವರು ಸೇರಿ ಅಪಮಾನ ಮಾಡುತ್ತಾರೆ. ನಾವು ಅಪಮಾನ ಸಹಿಸಲಾರೆವು"

◇ ◇ ◇

"ನೀನು ಅವಳ ಹಾಗೆ ಫಸ್ಟ್ ಬರಬೇಕು ಎಂದು ಹೇಳಬಾರದು.... ಕಲಿಯಲು ಹುಷಾರು ಇದ್ದವರನ್ನು ಯಾವಾಗಲೂ ಹೊಗಳುತ್ತಾ ಇರಬಾರದು. ತರಗತಿಯಲ್ಲಿ ಬುದ್ಧಿವಂತ ಮಕ್ಕಳನ್ನು, ದಡ್ಡ ಮಕ್ಕಳನ್ನು ಭೇದ ಮಾಡಬಾರದು".

◇ ◇ ◇

"ಸ್ಕೂಲ್‌ಡೇ ಮಾತ್ರವಲ್ಲದೆ ಪ್ರತೀ ವಾರದಲ್ಲಿ ಏನಾದರೂ ಸಾಂಸ್ಕೃತಿಕ ಕಾರ್ಯಕ್ರಮವಿರಬೇಕು".

◇ ◇ ◇

"ಆಟ, ಹಾಡು, ಕುಣಿತ, ಕಥೆ, ನಾಟಕ, ಯಕ್ಷಗಾನ ಇತ್ಯಾದಿ - ಶಿಕ್ಷಕರು ತಿಳಿದಿರಬೇಕು. ಬರೀ ಪಾಠ ಮಾಡುವುದಿಲ್ಲ".

◇ ◇ ◇

"ಪರೀಕ್ಷೆ ಪರೀಕ್ಷೆ ಎಂದು ಹೆದರಿಸುತ್ತಿರಬಾರದು"

◇ ◇ ◇

"ಕಲಿಸುವಾಗ, ನಮ್ಮ ತಪ್ಪು ಎತ್ತಿ ತೋರಿಸಿಕೊಡುವುದೇ ಉದ್ದೇಶವಾಗಿರಬಾರದು. ತಪ್ಪು ಮಾಡಿದಾಗ ಬುದ್ಧಿವಾದ ಹೇಳಿ - ಆದರೆ ಹೊಡೆಯಬೇಡಿ."

◇ ◇ ◇

"ಜಾತಿಯ ಹೆಸರು ಹೇಳಿ ನಿಂದನೆ ಮಾಡಬಾರದು".

◇ ◇ ◇

"ಮನೆಯಲ್ಲಿ ನನ್ನ ಅಮ್ಮ ನೋಡಿಕೊಳ್ಳುವ ಹಾಗಿರುವ ಟೀಚರ್ ನನಗಿಷ್ಟ.... ಅಮ್ಮ ಪೆಟ್ಟು ಕೊಟ್ರೆ ಸ್ವಲ್ಪ ಹೊತ್ತಿನಲ್ಲಿಯೇ ಮುದ್ದು ಮಾಡ್ತಾರೆ".

◇ ◇ ◇

"ಪೆಟ್ಟು ಕೊಟ್ರೆ ನೋವಾಗುತ್ತದೆ. ನೋವಾದಾಗ ನನಗೆ ಕೋಪ ಬರುತ್ತದೆ. ಕೋಪ ಬಂದಾಗ ಟೀಚರ್‌ನ್ನು ತಿಂದು ಬಿಡುವ ಅನ್ನಿಸುತ್ತದೆ. ಆದ್ರೆ ತಿನ್ನಲಿಕ್ಕೆ ಆಗುವುದಿಲ್ಲ ಅಲ್ವ!"

◇ ◇ ◇

"ಒಂದೊಂದು ಸಲ ನಂಗೆ ಮನೆಯಲ್ಲೂ ಪೆಟ್ಟು,

ಶಾಲೆಯಲ್ಲೂ ಪೆಟ್ಟು, ಆಗ ಸತ್ತು ಹೋಗುವ ಅನ್ನಿಸ್ತದೆ..... ಯಾವುದಾದ್ರೂ ಮನೆಯ ಕೆಲಸ ಮಾಡಿರುವುದಿಲ್ಲ. ಏನಾದ್ರೂ ಕೋಪದಲ್ಲಿದ್ದ ಅಪ್ಪ ನಂಗೆ ಎರಡು ಕೊಡ್ತಾರೆ, ಶಾಲೆಗೆ ಬಂದಾಗ ಹೋಂವರ್ಕ್ ಮಾಡಿಲ್ಲ ಎಂದು ಟೀಚರ್ ಪೆಟ್ಟು ನಂಗೆ".

✧ ✧ ✧

"ಪಾಠ ಅಂದರೆ.... ಮಂಡೆ ಬಿಸಿ...... ಟೀಚರ್ ಪಾಠ ಮಾಡುವಾಗ ನಾವು ಮಾತಾಡುವ ಹಾಗಿಲ್ಲ, ಮೌನವಾಗಿ ಕುಳಿತಿರಬೇಕು. ಅವರು ಕೇಳಿದ ಪ್ರಶ್ನೆಗೆ ಉತ್ತರಿಸಬೇಕು ಇಲ್ಲದಿದ್ದರೆ ಪೆಟ್ಟು ತಿನ್ನಬೇಕು. ಪೆಟ್ಟು ಕೊಡುವಾಗ ನಾನು ಶಾಲೆಗೆ ಹೋಗುವುದಿಲ್ಲ, ಮನೆಯಲ್ಲಿ ತೋಟದ ಕೆಲಸ ಮಾಡುವ, ಅನ್ನಿಸುತ್ತದೆ."

✧ ✧ ✧

"ನನಗೆ ಎಲ್ಲರಿಗಿಂತ.... ಟೀಚರ್ ಇಷ್ಟ. ಅವರು ಪಾಪ. ಪ್ರಶ್ನೆಗೆ ಉತ್ತರ ಹೇಳದಿದ್ದರೆ ಬೈಯ್ಯುವುದಿಲ್ಲ. ಬೇರೆ ಟೀಚರ್‌ಗಳು ಬೈಯುತ್ತಾರೆ. ಬೆಂಚಿನ ಮೇಲೆ ನಿಲ್ಲಿಸುತ್ತಾರೆ".

✧ ✧ ✧

"ತುಂಬ ನೋಟ್ಸ್ ಕೊಡುವುದು, ಬಾಯಿಪಾಠ ಮಾಡದಿದ್ದರೆ ಶಿಕ್ಷಿಸುವುದು, ಕ್ಲಾಸ್ ಲೀಡರ್ ಇಂದ ನೋಟ್ಸ್ ಬರೆಸುವುದು, ತಾವು ಆರಾಮವಾಗಿ ಖುರ್ಚಿಯಲ್ಲಿ ಕುಳಿತಿರುವುದು ಅಥವಾ ಬೇರೆ ತರಗತಿಯ ನೋಟ್ಸ್ ತಿದ್ದುವುದು ಮಾಡ್ತಾರೆ".

✧ ✧ ✧

"ಆಟ, ಕುಣಿತ, ನೃತ್ಯ, ನಾಟಕ, ಕಥೆ, ಚಿತ್ರ ತಿಳಿಯದ ಶಿಕ್ಷಕರೇ ಇರುವುದು ಅವರು ಬರಿ ಪಾಠ ಮಾಡುತ್ತಾರೆ".

✧ ✧ ✧

"ನಮಗೆ ಮಧ್ಯಾವಧಿ ಮತ್ತು ವಾರ್ಷಿಕ ಪರೀಕ್ಷೆಗಳು ಮಾತ್ರ ಸಾಕು."

✧ ✧ ✧

"ನಮಗೆ ಪರೀಕ್ಷೆಗಳು ಬೇಕು, ಆದರೆ ಫೇಲಾಗಬಾರದು".

✧ ✧ ✧

"ನಮಗೆ ಮಾತ್ರ ಯಾಕೆ ಪರೀಕ್ಷೆ? ಟೀಚರ್‌ಗೆ ಯಾಕೆ ಪರೀಕ್ಷೆ ಇಲ್ಲ"

✧ ✧ ✧

*ಕೃಪೆ : 'ಸಂಗತಿ' ಪತ್ರಿಕೆ*

---

## ಶಿಕ್ಷಣಕ್ಕೆ ಹಣದ ಅಗತ್ಯ ಕಡಿಮೆ

*ಉತ್ತಮ ಶಿಕ್ಷಣ ಸಿಗುವುದೇ ನಗರಗಳಲ್ಲಿ, ಪ್ರತಿಷ್ಠಿತ ಶಾಲೆಗಳಲ್ಲಿ ಎಂಬ ಮಾಮೂಲಿ ನಂಬಿಕೆಗೆ ವಿರುದ್ಧವಾಗಿ ಮಗಳು ಶಾಲೆ ಕಲಿಯುವ ಸಮಯಕ್ಕೆ ಸರಿಯಾಗಿ ನಗರವನ್ನು ಬಿಟ್ಟು, ತಮ್ಮ ಹಳ್ಳಿಗೆ ಹಿಂತಿರುಗಿ ಅಲ್ಲಿ ಶಾಲೆಗೆ ಮಗಳನ್ನು ಸೇರಿಸಿದ ವಾಣಿ ಮತ್ತು ಉಮಾಶಂಕರ ಅವರು ತಮ್ಮ ಅನುಭವವನ್ನು ಹಂಚಿಕೊಂಡಿದ್ದಾರೆ.*

ಮಗಳು ಶಾಲೆಗೆ ಹೋಗಬೇಕಾದ ವಯಸ್ಸು ಬಂದಾಗ, ಒಮ್ಮೆ ಈ ಹಿಂದೆ ಶಿಕ್ಷಣದ ಬಗ್ಗೆ ಮಾಡುತ್ತಿದ್ದ ಚರ್ಚೆ-ವಿಶ್ಲೇಷಣೆಗಳು ಎಲ್ಲವೂ ಪರೀಕ್ಷೆಗೆ ಒಳಗೊಳ್ಳುವ ಕ್ಷಣ ಬಂದ ಹಾಗೆ ಅನಿಸಿತು. ಇಷ್ಟರಲ್ಲಿಯೇ, ಮಗಳ/ಇತರ ಮಕ್ಕಳ ಒಡನಾಟದಲ್ಲಿ "ಕಲಿಸುವುದು" - ಎಂಬುದೇ ಒಂದು ಭ್ರಮೆಯೇನೋ ಅನ್ನಿಸತೊಡಗಿತ್ತು.

ಮಗಳನ್ನು ಶಾಲೆಗೆ ಕಳುಹಿಸುವ ಬಗ್ಗೆ ಒಂದು ನಿರ್ಧಾರ ತೆಗೆದುಕೊಳ್ಳಲೇಬೇಕಾಗಿತ್ತು. ಎದುರಿಗಿದ್ದ ಆಯ್ಕೆಗಳು - ಸಾಧ್ಯತೆಗಳು ಕೆಲವು. ಮೊದಲನೆಯದು, ಪರ್ಯಾಯ ಶಾಲೆಗಳು, ಸಾಕಷ್ಟು ಕಡಿಮೆ ಕಟ್ಟುಪಾಡುಗಳೊಂದಿಗೆ, ಮಕ್ಕಳ ಅಭಿರುಚಿಗೆ ತಕ್ಕಂತೆ ವಿದ್ಯೆ ಒದಗಿಸುವ, ಕಲಿಯುವ ವಾತಾವರಣ ಸೃಷ್ಟಿಸುವ ಒಂದು ಪ್ರಯತ್ನ. ಇದು ನಮ್ಮನ್ನು ಬಹಳ ಆಕರ್ಷಿಸಿದ್ದೂ ಇದೆ. ಆದರೆ ಹತ್ತಿರದಿಂದ ನೋಡುವಾಗ, ಇದರಲ್ಲಿ ಪರ್ಯಾಯವೇನಿದೆ ಎಂಬುದೇ ಅರ್ಥವಾಗಲಿಲ್ಲ. ಜತೆಗೆ ಯಾಕೋ ಬಹಳ ಪರಕೀಯ (alienated)ವಾಗಿದೆ ಅಂತ ಕೂಡಾ ಅನ್ನಿಸಿತು. ಇದಕ್ಕೂ ಹೆಚ್ಚಾಗಿ, ಇದೊಂದು ಶ್ರೀಮಂತ ವರ್ಗದ ವ್ಯವಹಾರ, ಮಕ್ಕಳನ್ನು ಒಂದು ರೀತಿಯಲ್ಲಿ ಪ್ರತ್ಯೇಕಿಸಿ ಬೆಳೆಸುವ ಪ್ರಕ್ರಿಯೆ ಎಂಬ ಭಾವನೆ ಜೋರಾಗಿ ಬಂತು. ಇದರೊಂದಿಗೇ ಪರ್ಯಾಯ ಶಾಲೆಯ ಯೋಚನೆಯನ್ನೇ ಬಿಟ್ಟುಬಿಟ್ಟೆವು.

ಮತ್ತೊಂದು ಸಾಧ್ಯತೆ - ಆಂಗ್ಲ ಮಾಧ್ಯಮದ ನಮ್ಮ ಸಾಮಾನ್ಯ ಕಾನ್ವೆಂಟ್ ಶಾಲೆಗಳು. ಠಾಕು-ಠೀಕು ಮಾಡಿಕೊಂಡು, ಬೆಳೆಯುವ ಮಕ್ಕಳನ್ನು ನೋಡುವಾಗ - ಯಾವಾಗಲೂ, ಪಟ್ಟಣದ ಪಾರ್ಕುಗಳಲ್ಲಿ ಕತ್ತರಿಸಿ, ಕತ್ತರಿಸಿ ತಮಗೆ ಬೇಕಾದ ಆಕಾರ ಕೊಟ್ಟು ಬೆಳೆಸುವ ಕ್ರೋಟನ್ ಗಿಡಗಳ ನೆನಪು ಬರುತ್ತಿತ್ತು. ಮಕ್ಕಳ ಬಾಲ್ಯವೇ ಮುರುಟಿ ಹೋಗುವ ಭಾವನೆ ತರಿಸುವಂತಿತ್ತು. ಇದನ್ನೂ ಕೈಬಿಟ್ಟೆವು.

ಆಗ ಉಳಿದದ್ದು ಮತ್ತೆರಡು ಯೋಚನೆಗಳು. ಒಂದೋ ಶಾಲೆಗೇ ಕಳುಹಿಸಬಾರದು, ಇಲ್ಲವೇ ಹಳ್ಳಿಯ ಸಾಧಾರಣ ಸರಕಾರಿ ಪ್ರಾಥಮಿಕ ಶಾಲೆಗಳಿಗೆ ಕಳುಹಿಸುವುದು. ಶಾಲೆಗೇ ಕಳುಹಿಸುವುದಿಲ್ಲೆನ್ನುವಾಗ, ಒಂದು ರೀತಿಯಲ್ಲಿ, ಅಗಾಧವಾದ ಬಯಲು ತೆರೆದುಕೊಂಡ ಹಾಗೆ ಆಯಿತು. ಇದರಲ್ಲಿ ಎಲ್ಲವನ್ನೂ ಮಾಡಬಹುದು, ಆದರೆ ನಿರಂತರವಾಗಿ ಒಂದಷ್ಟು ಜನ ಮಕ್ಕಳ ಒಡನಾಟ ಕೊಡುವುದು ಸಾಧ್ಯವೇ ಇಲ್ಲ ಅನ್ನಿಸಿತು. ಮಕ್ಕಳು - ಅವರ ಒಡನಾಡಿಗಳೊಂದಿಗೆ ಬೆಳೆಯುವುದು ಒಂದು ಮೂಲಭೂತ ಅವಶ್ಯಕತೆಯೇ ಅಂತ ಅನ್ನಿಸಿತು.

ಅಂತಿಮವಾಗಿ ನಮ್ಮ ಪಾಲಿಗೆ ಉಳಿದದ್ದು ಹಳ್ಳಿಯ ಸರಕಾರಿ ಪ್ರಾಥಮಿಕ ಶಾಲೆಗಳು. ಉಳಿದೆಲ್ಲದಕ್ಕಿಂತಲೂ ನಮಗೆ ಇದುವೇ ಸೂಕ್ತ - "ಸೊಗಸು" ಎಂದೇ ಅನಿಸಿತು. ಇದು ಅನಿವಾರ್ಯವಾದ ಆಯ್ಕೆ ಅಲ್ಲ. ಇದು ತಾತ್ವಿಕವಾಗಿ ಮಾಡಿಕೊಂಡ ಆಯ್ಕೆ.

ಮಕ್ಕಳ ಸೃಜನಶೀಲತೆಗೆ, ಬೇಕಾಗಿರುವುದು ಅದ್ಭುತವಾದ ಜ್ಞಾನ ಅಥವಾ ಮಾಹಿತಿಯ ಸರಬರಾಜು ಅಲ್ಲ, ಅವರಿಗೆ ಅವರದ್ದೇ ಆದ "ಸಮಯ ಮತ್ತು ಅವಕಾಶ" ಬೇಕಾಗಿದೆ ಎಂಬುದು - ನಾವು ಮಕ್ಕಳ ಅನೇಕ ಕಾರ್ಯಾಗಾರಗಳ ಅನುಭವದಲ್ಲಿ ಕಂಡುಕೊಂಡ ಒಂದು ಒಳನೋಟ. ಪ್ರತಿಷ್ಠಿತ ಶಾಲೆಗಳಲ್ಲಿ - ಹತ್ತಾರು ಅವಕಾಶಗಳಿದ್ದರೂ ಅವು ಅವರ ಚೌಕಟ್ಟಿನ ಒಳಗೆ ಇರುವಂತಹವು, ನಿರ್ಬಂಧನೆಗಳ ಒಳಗೆ ಇರುವಂತಹವು, ಅಷ್ಟೇ ಅಲ್ಲ, ಇತರರ ತುಲನೆಗೆ ಒಳಗಾಗುವಂತಹವು ಆಗಿರುತ್ತವೆ. ಅದಕ್ಕೇ ಅದು ಮಕ್ಕಳಿಗೆ ಅವರಿಗಾಗಿಯೇ ಇರುವಂತಹುದು ಆಗಿರುವುದಿಲ್ಲ. ಸದಾ ಇತರರ-ಲಗಾಮು ಕಂಡೋ ಕಾಣದೆಯೋ ಇರುತ್ತದೆ. ಈ ನಿಟ್ಟಿನಲ್ಲಿ ಸರಕಾರಿ ಪ್ರಾಥಮಿಕ ಶಾಲೆಗಳು, ಬೇಕೋ-ಬೇಡದೆಯೋ ಮಕ್ಕಳನ್ನು ಅವರ ಪಾಡಿಗೆ ಬಿಟ್ಟುಬಿಡುವ ಸಮಯ ಸ್ವಲ್ಪ ಹೆಚ್ಚಾಗಿಯೇ ಇರುತ್ತದೆ.

ಇದರೊಂದಿಗೆ ಹಳ್ಳಿಯಲ್ಲಿ ಬೆಳೆಯುವುದೇ - ಇನ್ನೊಂದು ಸೊಗಸು. ಹಳ್ಳಿಯ ಮಹತ್ವ, ಹಳ್ಳಿಯ ಬದುಕಿನಲ್ಲಿ ಬೆಳೆಯುವ ಮಹತ್ವ, ಕಂಡುಕೊಂಡವರು ನಾವು. ಎಷ್ಟೆಷ್ಟೋ ಪಟ್ಟಣದ ಆಕರ್ಷಣೆಗಳ ಮಧ್ಯೆ, ಹಳ್ಳಿ ನಮ್ಮನ್ನು ಮತ್ತೆ ಮತ್ತೆ ಹಿಂದಕ್ಕೆ ಕರೆದಿತ್ತು. ಹಳ್ಳಿಯ ಸಂಸ್ಕೃತಿಯೊಂದಿಗೆ, ಬೆಳೆಯುವುದೇ ಒಂದು ಸಮೃದ್ಧ ಕಲಿಕಾ ಅನುಭವ'.

ಇದೆಲ್ಲಾ ಹೇಳುವಾಗ, ಈ ಶಾಲೆಗಳಿಗೆ - ಶಿಕ್ಷಣಕ್ಕೆ - ಹಣ ಸುರಿಯಬೇಕಾದ ಅಗತ್ಯವೂ ತೀರಾ ಕಡಿಮೆ ಎಂಬುದನ್ನು ಹೇಳಲೇಬೇಕಾಗುತ್ತದೆ. ನಮ್ಮ ಬದುಕಿನ ಶೈಲಿಯನ್ನು ನಿರ್ಧರಿಸುವುದಕ್ಕೂ ಇದು ತುಂಬಾ ಮುಖ್ಯ ಅಂಶವಾಗಿತ್ತು. ಮಗಳು, ಜನಸಾಮಾನ್ಯ ಮಕ್ಕಳೊಂದಿಗೆ ಬದುಕಿನ ಮೂಲಭೂತ ಮೌಲ್ಯಗಳನ್ನು, ಗುರುತಿಸಿಕೊಳ್ಳುತ್ತ ಬೆಳೆಯುವುದೇ ಒಳ್ಳೆಯದು ಎಂದೂ ಅನಿಸಿತ್ತು.

ಇವೆಲ್ಲದರ ನಡುವೆ ಬೆಳೆಯುತ್ತಿರುವ ಜಗತ್ತಿನ ವಿದ್ಯಮಾನ, ಮಾಹಿತಿ, ಜ್ಞಾನದ ಕೊರತೆಯೂ ಆಗಬಹುದಲ್ಲಾ ಅನ್ನಿಸಿತು. ಆದರೆ ಇದು, ನಮಗೆ ಹೆಚ್ಚು ಕಷ್ಟವೆನಿಸಲಿಲ್ಲ. ಹೊಸ ಮಾಹಿತಿ, ಜ್ಞಾನ, ಅನುಭವಗಳನ್ನು ಒದಗಿಸುವುದಕ್ಕೆ ಪೂರಕವಾದ ವ್ಯವಸ್ಥೆಯನ್ನು ಮಾಡುವ ಸಾಧ್ಯತೆಯಂತೂ ಬಲವಾಗಿ ಕಂಡಿತ್ತು. ಹಾಗೆ ಮಾಡುವಾಗಲೂ ನಮ್ಮ ಮಕ್ಕಳಿಗೆ ಮಾತ್ರವಲ್ಲ, ಅಕ್ಕಪಕ್ಕದ ಇತರ ಮಕ್ಕಳನ್ನೂ ಒಳಗೊಳ್ಳಿಸುವುದೂ ಹೆಚ್ಚು ಅರ್ಥಪೂರ್ಣವೆಂದೂ ಅನಿಸಿತು. ಮಗಳಿಗಾಗಿ ಬೆಳೆಸುವ ಲೈಬ್ರೆರಿಯನ್ನೊ ಅನೇಕ ಮಕ್ಕಳು ಉಪಯೋಗಿಸುವುದು, ಬೇರೆ ಬೇರೆ ರೀತಿಯ ಮಕ್ಕಳ ಕಾರ್ಯಾಗಾರಗಳನ್ನು ಹಳ್ಳಿಗಳಲ್ಲಿ ನಡೆಸುವುದು, ಶಾಲೆಯ ಶಿಕ್ಷಕ-ರಕ್ಷಕ ಸಂಘದಲ್ಲಿ ಒಳಗೊಂಡು ಮಕ್ಕಳ ಬೆಳವಣಿಗೆಗೆ ಪೂರಕವಾದ ಚಟುವಟಿಕೆಗಳನ್ನು ಮಕ್ಕಳು ಆನಂದಿಸುವ ರೀತಿಯಲ್ಲಿ ಮಾಡುವುದು - ನಾವು ಗುರುತಿಸಿಕೊಂಡು ನಡೆಸಿಕೊಂಡು ಬರುತ್ತಿರುವ ಕೆಲವು ದಾರಿಗಳು.

ಆದರೆ ಜನಸಾಮಾನ್ಯ ಬದುಕೊಂದನ್ನು ಆಯ್ಕೆ ಮಾಡುವ "ಆದರ್ಶವೇ" ಮಕ್ಕಳ ಮೇಲೆ ಹೊರೆಯಾಗುವ ಒಂದು ವಿಚಾರವನ್ನೂ ಸ್ನೇಹಿತರು ಮುಂದಿಟ್ಟಿದ್ದರು. ಬಹುಶಃ ಈ ಪ್ರಶ್ನೆ ನಮ್ಮ ಮುಂದೆಯೂ ಇದೆ. ಸದ್ಯ ನಮಗೆ ಖುಷಿ ಕೊಡುವ ಅಂಶ ನಮ್ಮ ಮಗಳು ಅವಳ ಸರಕಾರಿ ಶಾಲೆಯನ್ನು ಖುಷಿಪಡುವ ರೀತಿ; ಅವಳು ತನ್ನ ಊರಿನ ಬಗ್ಗೆ ಬರೆದಾಗ ತುಂಬಾ ಅಭಿಮಾನದಿಂದ ಆ ಊರಿನ ಬಗ್ಗೆ ಹೇಳಿಕೊಳ್ಳುವುದು. ಇನ್ನೂ ಇದಕ್ಕೂ ಮೀರಿದ ವಿಷಯಗಳಿಗೆ ಮುಂದೆ ನಾವು ತಯಾರಿರ ಬೇಕಾಗುತ್ತದೆ.

ಇದಕ್ಕೆಲ್ಲಕ್ಕೂ ಮಿಗಿಲಾಗಿ 'ಜನಸಾಮಾನ್ಯರ' ಬದುಕನ್ನು ತನ್ನದಾಗಿಸುವುದರಲ್ಲಿ ನಮ್ಮ ಸ್ನೇಹಿತರು ತಿಳಿದುಕೊಂಡ ಹಾಗೆ 'ಆದರ್ಶ'ವೇನೂ ಇಲ್ಲ. ನಾವೆಲ್ಲರೂ ಬದುಕಬೇಕಾದ ರೀತಿ ಅದು. ಸದ್ಯ ಈ ಸಾಮಾಜಿಕ ಆರ್ಥಿಕ ಪರಿಸ್ಥಿತಿಯಲ್ಲಿ ಬೇರೆ ಯಾವ ದಾರಿಯೂ ನಮಗೆ ಕಾಣುವುದಿಲ್ಲ. ಇದು ನಾವು ಇಷ್ಟಪಟ್ಟ ರೀತಿ. ನಾವು ಎಲ್ಲರೂ ಸದ್ಯ ಸಂತೋಷವಾಗುವ ರೀತಿ.

*ವಾಣಿ, ಉಮಾ,*

# ನಮ್ಮನ್ನು ಒಟ್ಟಿಗೆ ಬದುಕಲು ಬಿಡಲಿಲ್ಲ

*ದಿನಾಂಕ 10, ಅಕ್ಟೋಬರ್ 1998ರಂದು ಒರಿಸ್ಸಾ ರಾಜ್ಯದ ಹುಲಿಪುರ್ ಗ್ರಾಮದಲ್ಲಿ ಮಮತ ಮತ್ತು ಮೊನಲಿಸಾ ಎಂಬ ಇಬ್ಬರು ಯುವತಿಯರು ಆತ್ಮ ಹತ್ಯೆ ಮಾಡಿಕೊಂಡರು. ಅವರಿಬ್ಬರು 5 ವರ್ಷಗಳಿಂದ ಆತ್ಮೀಯ ಗೆಳತಿಯರಾಗಿದ್ದು, ಒಟ್ಟಿಗೆ ಜೀವನ ಸಂಗಾತಿಗಳಾಗಿ ಬದುಕಬೇಕೆಂದು ಸಾಯುವ 4 ದಿನಗಳ ಹಿಂದಷ್ಟೇ ಕಾನೂನುಬದ್ಧವಾಗಿ ಕರಾರು ಒಪ್ಪಂದ ಮಾಡಿಕೊಂಡಿದ್ದರು. ಮೊನಲಿಸಾಳ ತಂದೆಗೆ ವರ್ಗವಾಗಿದ್ದರಿಂದ ಅವಳನ್ನು ಅವಳ ತಂದೆ ಬೇರೆ ಊರಿಗೆ ಕರೆದುಕೊಂಡು ಹೋಗಬೇಕೆಂದು ತೀರ್ಮಾನಿಸಿದ್ದರು. ಬೇರೆ ಊರಿಗೆ ಹೋದರೆ ತಾವಿಬ್ಬರು ದೂರವಾಗಿಬಿಡುತ್ತೇವೆಂದು, ಅಗಲಿಕೆಯನ್ನು ಸಹಿಸಿಕೊಳ್ಳುವುದು ಸಾಧ್ಯವಿಲ್ಲವೆಂದು ಇಬ್ಬರು ಸೇರಿ ವಿಷ ಸೇವಿಸಿ, ರಕ್ತನಾಳ ಕತ್ತರಿಸಿಕೊಂಡು ಆತ್ಮ ಹತ್ಯೆಗೆ ಪ್ರಯತ್ನಿಸಿದರು. ಮನೆಯವರಿಗೆ ಗೊತ್ತಾಗಿ ಆಸ್ಪತ್ರೆ ಸೇರಿಸಲು ಕರೆದ್ಯೊಯ್ಯುವಾಗ ಮೊನಲಿಸಾ ದಾರಿಯಲ್ಲೇ ಅಸುನೀಗಿದಳು. ಮಮತಾಳ ಜೀವ ಉಳಿಸಲಾಯಿತು. ನಂತರ ಆಕೆ ಎಲ್ಲಿದ್ದಾಳೆ ಎಂಬುದನ್ನು ಗುಪ್ತವಾಗಿರಿಸಲಾಗಿದೆ. ಈ ಘಟನೆ ಕುರಿತು ಒರಿಸ್ಸಾದ ಸ್ವಯಂ ಸೇವಾ ಸಂಸ್ಥೆಯೊಂದರಲ್ಲಿ ಕೆಲಸ ಮಾಡುವ ವ್ಯಕ್ತಿಯೊಬ್ಬರು ದೆಹಲಿಯಲ್ಲಿರುವ A.B.V.A. (ಏಡ್ಸ್ ಭೇದ್‌ಬಾವ್ ವಿರೋಧಿ ಆಂದೋಲನ್) ಸಂಘಟನೆಗೆ ಪತ್ರ ಬರೆದು ಘಟನೆ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹಿಸಿ ನಿಜವೇನೆಂಬುದರ ಬಗ್ಗೆ ಬೆಳಕು ಚೆಲ್ಲಬೇಕೆಂದು ಕೋರಿ ಪತ್ರ ಬರೆದಿದ್ದರು. ಆ ಆಧಾರದ ಮೇಲೆ ABVAಯ ಇಬ್ಬರು ಸದಸ್ಯರು ಹುಲಿಪುರಕ್ಕೆ ಭೇಟಿ ನೀಡಿ ಮಾಹಿತಿ ಸಂಗ್ರಹಿಸಿ ವರದಿಯನ್ನು ತಯಾರಿಸಿದ್ದಾರೆ. ವರದಿಯ ಸಂಕ್ಷಿಪ್ತ ರೂಪವನ್ನು ಇಲ್ಲಿ ಕೊಡಲಾಗಿದೆ.*

*A.B.V.A.ಯು ಶಿಕ್ಷಣ, ಆರೋಗ್ಯ, ಕಾನೂನು ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವವರು, ಮಹಿಳಾ ಹಕ್ಕುಗಳಿಗಾಗಿ, ಸಲಿಂಗಿಗಳ ಹಕ್ಕುಗಳಿಗಾಗಿ ಕೆಲಸ ಮಾಡುತ್ತಿರುವವರು, ವೃತ್ತಿಪರ ರಕ್ತದಾನಿಗಳು, ಶಾಂತಿಗಾಗಿ ಕೆಲಸ ಮಾಡುತ್ತಿರುವ ದೆಹಲಿಯ ನಾಗರೀಕರನ್ನೊಳಗೊಂಡ ಸಂಸ್ಥೆಯಾಗಿದ್ದು ಕಳೆದ ಹತ್ತು ವರ್ಷಗಳಿಂದಲೂ ಲೈಂಗಿಕ ಕಾರ್ಮಿಕರು, ಏಡ್ಸ್ ರೋಗಿಗಳಿಗಾಗಿ ಕೆಲಸ ಮಾಡುತ್ತಿದೆ. ಶಿವಸೇನೆಯವರು ಫೈರ್ ಚಿತ್ರದ ಮೇಲೆ ನಡೆಸಿದ ದಾಳಿಯ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು, ಒರಿಸ್ಸಾದ ಆತ್ಮ ಹತ್ಯೆ ಘಟನೆ ಕುರಿತು ಬೆಳಕು ಚೆಲ್ಲುವುದು ಮುಖ್ಯವಾಗಿದ್ದರಿಂದ ವಿಚಾರಣಾ ಟೀಮ್ (enquiry team) ಕಳಿಸುವ ಬಗ್ಗೆ ABVAಯಲ್ಲಿ ತೀರ್ಮಾನಿಸಲಾಯ್ತು. ABVA ಇಬ್ಬರು ಸದಸ್ಯರು ಫೆಬ್ರವರಿ 5ರಂದು ಒರಿಸ್ಸಾಗೆ ಹೋಗಿ ಮಮತ, ಮೊನಲಿಸಾಳ ಕುಟುಂಬದ ಸದಸ್ಯರು, ಸಂಬಂಧಪಟ್ಟ ಪೊಲೀಸರನ್ನು ಭೇಟಿ ಮಾಡಿ ವರದಿ ತಯಾರಿಸಿದ್ದಾರೆ.*

ಮಮತಾಳ ತಂದೆ ದ್ರುಭ ಮೊಹಂತಿಯವರು ನೀಡಿದ ವಿವರಣೆ : ಮಮತ ಮತ್ತು ಮೊನಲಿಸ ಇಬ್ಬರು ಒಬ್ಬರನ್ನೊಬ್ಬರು ಅಗಲಿರದಾರದಂತಹ ಗೆಳತಿಯರಾಗಿದ್ದರು. ಒಂದು ದಿನವು ಒಬ್ಬರನ್ನೊಬ್ಬರು ನೋಡದೆ ಇರುತ್ತಿರಲಿಲ್ಲ. ಮಮತಳಿಗೆ ಬೇರೆ ಯಾರ ಸ್ನೇಹವೂ ಇರಲಿಲ್ಲ. ಮೊನಲಿಸ ಪಿ.ಯು.ಸಿ.ಯಲ್ಲಿ ಓದುತ್ತಿದ್ದಳು. ವಿದ್ಯುತ್ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಅವಳ ತಂದೆಗೆ ಮರ್ರುಸ್ಗೈ ಜಿಲ್ಲೆಗೆ ವರ್ಗವಾಗಿತ್ತು. ಮೊನಲಿಸ ಮುಂದಿನ ಓದನ್ನು ಮುರ್ರುಸ್ಗೈನಲ್ಲೆ ಮುಂದುವರೆಸಬೇಕೆಂದು ತೀರ್ಮಾನಿಸಿದ್ದರು. ಅದಕ್ಕೆ ತಕ್ಕ ಏರ್ಪಾಡನ್ನು ಮಾಡಿದ್ದರು. 11.10.98ರಂದು ಅವರು ಹೋಗಬೇಕಾಗಿತ್ತು. ದೂರವಾಗಿಬಿಡುತ್ತೇವೆನ್ನುವ ಅಗಲಿಕೆಯ ನೋವು ಅವರನ್ನು ಆತ್ಮಹತ್ಯೆಗೆ ಪ್ರೇರೇಪಿಸಿತು. ಆ ದಿನ ಮಧ್ಯಾನದ ಹೊತ್ತಿಗೆ ಮಮತ ಮತ್ತು ಮೊನಲಿಸಾ ಮಮತಳ ಮನೆಗೆ ಬಂದರು. ಅವರಿಬ್ಬರೂ ಒಟ್ಟಿಗೆ ಮಮತಾಳ ರೂಮಿನಲ್ಲಿ ಗಂಟೆಗಟ್ಟಳೆ ಸಮಯ ಕಳೆಯುತ್ತಿದ್ದುದು ಸಾಮಾನ್ಯ ವಿಷಯವಾಗಿತ್ತು.

ಮಮತಾಳ ತಾಯಿಯ ವಿವರಣೆ : ಮಮತ ಮಧ್ಯಾನ 3ರ ಹೊತ್ತಿಗೆ ಊಟ ಮಾಡುತ್ತಿದ್ದಳು. ಆ ದಿನ 5.10 ಆದರೂ ಆಕೆ ಊಟಕ್ಕೆ ಬರದೇ ಇದ್ದುದರಿಂದ ಅವರ ರೂಮಿನ ಬಳಿ ಹೋದೆ. ಇಬ್ಬರೂ ಅಳುತ್ತಿದ್ದುದು ಕೇಳಿಸಿತು. ಒಳಗೆ ಹೋದಾಗ ಇಬ್ಬರೂ ರಕ್ತದಲ್ಲಿ ತೋಯ್ದು ಹೋಗಿದ್ದರು. ಕುಡಿಯಲು ನೀರು ಕೇಳಿದರು. ತೆಗೆದುಕೊಂಡು ಹೋಗಿ ಕೊಟ್ಟೆ, ಏನೂ ಮಾಡಿಕೊಂಡು ಬಿಟ್ಟಿದ್ದೀರಿ ಎಂದು ಕೇಳಿದಾಗ ಮಮತ "ಸಮಾಜ ನಮ್ಮನ್ನು ಒಟ್ಟಿಗೆ ಬದುಕಲು ಬಿಡಲಿಲ್ಲ. ಅದಕ್ಕೆ ಬದುಕನ್ನು ಕೊನೆಗೊಳಿಸಲು

ಆತ್ಮಹತ್ಯೆ ಮಾಡಿಕೊಂಡಿದ್ದೇವೆ" ಎಂದಳು. ಮೋನಲಿಸಾ "ನಮ್ಮಿಬ್ಬರನ್ನು ದೂರ ಮಾಡಲು ಯಾರಿಗೂ ಸಾಧ್ಯವಿಲ್ಲ" ಎಂದಳು. ಗಾಭರಿಯಾಗಿ ಸಹಾಯಕ್ಕಾಗಿ ಓಡಿ ಹೋದೆ. ಮೊದಲು ಅವರನ್ನು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಸೇರಿಸಲಾಯ್ತು. ಅಲ್ಲಿ ಪ್ರಥಮ ಚಿಕಿತ್ಸೆ ನೀಡಿದ ಬಳಿಕ ಕಟಕ್‌ನಲ್ಲಿರುವ C.S.B. ಮೆಡಿಕಲ್ ಕಾಲೇಜ್ ಆಸ್ಪತ್ರೆಗೆ ಒಯ್ಯುತ್ತಿರುವಾಗ ದಾರಿಯಲ್ಲಿ ಮೋನಲಿಸ ಸತ್ತು ಹೋದಳು. ಮಮತಳನ್ನು ಮೆಡಿಕಲ್ ಕಾಲೇಜಿನ ಆಸ್ಪತ್ರೆಗೆ ಸೇರಿಸಲಾಯ್ತು. ಆಕೆ ಪ್ರಾಣಾಪಾಯದಿಂದ ಪಾರಾದಳು. ಈಗ ಅವಳು ಸತ್ಯ ನರ್ಸಿಂಗ್ ಹೋಂ (ಕಟಕ್)ನಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಳೆ. ಆಕೆಯ ಕೈ ಮೇಲಿನ ಗಾಯಗಳಿನ್ನು ವಾಸಿಯಾಗುತ್ತಿಲ್ಲವೆಂದು ಹೇಳಿದ್ದಾರೆ. ಒಂದೂವರೆ ತಿಂಗಳಿನಿಂದ ಅವಳನ್ನು ನಾನು ನೋಡಿಲ್ಲ. ಅವಳದೇ ನನಗೆ ಚಿಂತೆ. ಸಾಯುವ ಮೊದಲು ಇಬ್ಬರೂ "ನಮ್ಮ ಸಾವಿಗೆ ಯಾರೂ ಜವಾಬ್ದಾರರಲ್ಲ, ಇಬ್ಬರನ್ನು ಒಟ್ಟಿಗೆ ಸುಡಬೇಕೆಂಬುದೇ ನಮ್ಮ ಕೊನೆಯ ಆಸೆ" ಎಂದು ರಕ್ತದಲ್ಲಿ ಪತ್ರ ಬರೆದು ಇಬ್ಬರೂ ಸಹಿ ಮಾಡಿದ್ದರು.

ಮೋನಲಿಸಾಳ ಮನೆಗೆ ಹೋದಾಗ ಅಲ್ಲಿ ಮೋನಲಿಸಾಳ ಚಿಕ್ಕಪ್ಪ ಅಭಯ್ ಮೊಹಂತಿ ಮತ್ತು ತಾತಾ ಜೋಗಿಂದರ್ ಮೊಹಂತಿ ಅವರು ಮಾತನಾಡಲು ಸಿಕ್ಕರು. ಮೋನಲಿಸಾಳ ತಾತ ಜೋಗಿಂದರ್ ಅವರು ಒರಿಸ್ಸಾ ಪೊಲೀಸ್ ಇಲಾಖೆಯ CIB ವಿಭಾಗದಲ್ಲಿ ಇನ್‌ಸ್ಪೆಕ್ಟರ್ ಆಗಿದ್ದವರು. ಅವರ ಪ್ರಕಾರ ಇದೊಂದು ಸಲಿಂಗರತಿಗೆ ಸಂಬಂಧಿಸಿದ ಕೇಸು. ಮಮತ ಮತ್ತು ಮೋನಲಿಸ 5 ವರ್ಷಗಳಿಂದ ಗೆಳತಿಯರು. ಮೋನಲಿಸ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಮಮತ ಅವಳಿಗೆ ಪಾಠ ಹೇಳಿಕೊಡುತ್ತಿದ್ದಳು. ಮೋನಲಿಸಾ P.U.C. ಮುಗಿಸಿದ ಮೇಲೆ ಅವಳನ್ನು ಕಾಲೇಜಿಗೆ ಹೋಗದಂತೆ ಮಮತ ಮನವೊಲಿಸಿದಳು. ದಿನಾಂಕ 10.10.98ರಂದು ಮಮತ ಮನೆಗೆ ಬಂದು ಮೋನಲಿಸಾಳನ್ನು ಕರೆದುಕೊಂಡು ಹೋದಳು. ಸಂಜೆ 5.10ಕ್ಕೆ ಮೋನಲಿಸ ಮಮತಾಳ ಮನೆಯ ಹತ್ತಿರ ನೆಲದ ಮೇಲೆ ಬಿದ್ದಿದ್ದಳೆಂಬ ವಿಷಯ ತಿಳಿಯಿತು. ನನ್ನ ಮೊಮ್ಮಗ ಅಲೋಕ್ ಅಲ್ಲಿಗೆ ಹೋಗಿ ನೋಡಿದಾಗ ಅವಳು ರಕ್ತದ ಮಡುವಿನಲ್ಲಿ ಪ್ರಜ್ಞಾಹೀನ ಸ್ಥಿತಿಯಲ್ಲಿ ಬಿದ್ದಿದ್ದಳಂತೆ. ರಕ್ತ ಹರಿಯುವುದು ನಿಂತಿರಲಿಲ್ಲ. ಮೆಡಿಕಲ್ ಕಾಲೇಜಿಗೆ ಹೋಗುವಾಗ ದಾರಿಯಲ್ಲೇ ಆಕೆ ಸತ್ತುಹೋದಳು.

ಅವರಿಬ್ಬರ ನಡುವೆ ಸಲಿಂಗ ಸಂಬಂಧವಿತ್ತೆಂಬುದನ್ನು ನಾನು ಗಮನಿಸಿದ್ದೆ. ಅದಕ್ಕಾಗಿ ನಾನು ಮೋನಲಿಸಾಳನ್ನು ಮಮತಳೊಂದಿಗೆ ಬಿಡಬಾರದೆಂದು ಆಕೆಯ ತಾಯಿಗೆ ಹೇಳಿದ್ದೆ. ಸೊಸೆ ನನ್ನ ಮಾತು ಕೇಳಲಿಲ್ಲ. ಸಲಿಂಗ ಸಂಬಂಧವಿರುವವರು ಅಗಲಿಕೆ ತಾಳಿಕೊಳ್ಳದಿರುವುದಕ್ಕೆ ಏನನ್ನಾದರು ಮಾಡಬಲ್ಲರು. ಅಕ್ಟೋಬರ್ 7ರಂದೆ ಮೋನಲಿಸ ತಂದೆಯ ಜೊತೆ ಮರ್‍ಸಗೈಗೆ ಹೋಗಬೇಕಾಗಿತ್ತು. ಮಮತ, ಮೋನಲಿಸಳ ಮನವೊಲಿಸಿ ಆ ದಿನ ಹೋಗದೇ 11ರಂದು ಹೋಗುವಂತೆ ಒತ್ತಾಯಿಸಿದ್ದಳು. ಅವಳು ಹೋಗುವುದನ್ನು ತಡೆಯುವುದು, ಇಲ್ಲ ಅಗಲಿಕೆಗಾಗಿ ಪ್ರತೀಕಾರ ಕೈಗೊಳ್ಳುವ ಉದ್ದೇಶದಿಂದಲೇ ಮಮತ ಅವಳನ್ನು ತಡೆದಳು. ಮೋನಲಿಸಾಳ ಸಾವಿಗೆ ಮಮತಾಳೆ ಕಾರಣ. ಪತ್ರದಲ್ಲಿರುವ ಸಹಿ ಮೋನಲಿಸಾಳದೇ ಎನ್ನುವ ಬಗ್ಗೆ ನನಗೆ ಅನುಮಾನವಿದೆ. ಕೈ ಬರಹ ತಜ್ಞರು ಹೇಳುವವರೆಗೆ ನಂಬಲು ಸಾಧ್ಯವಿಲ್ಲ. ಅವರಿಬ್ಬರು ಮಾಡಿಕೊಂಡಿರುವ ಕರಾರು ಒಪ್ಪಂದದ ಪತ್ರವನ್ನು ನಾನು ನೋಡಿಯೇ ಇಲ್ಲ. ಎಷ್ಟರ ಮಟ್ಟಿಗೆ ಅದು ಅಥೆಂಟಿಕ್ ಎಂದು ಖಚಿತಪಡಿಸಿಕೊಳ್ಳುವ ಅಗತ್ಯವಿದೆ. ಮಮತ ತುಂಬಾ aggressive ಆದ ಹುಡುಗಿ. ಆಕೆಯ ರೂಮಿನಲ್ಲಿ ವಿಷ, ಕತ್ತಿ, ರೇಜರ್ ಇದ್ದುದು ಆಕೆಯ ಉದ್ದೇಶವನ್ನು ಸ್ಪಷ್ಟಪಡಿಸುತ್ತವೆ. ಆ ಕಾರಣಕ್ಕಾಗಿಯೇ ನಾನು ಮೋನಲಿಸಾಳ ಕೊಲೆ ಮಮತಳೆ ಮಾಡಿದ್ದಾಳೆಂದು ನನ್ನ ಮಗ ಅಶ್ವನಿ ಕುಮಾರ್ ಮೊಹಂತಿ ಹೆಸರಿನಲ್ಲಿ FIR ಫೈಲ್ ಮಾಡಿಸಿದ್ದೇನೆ.

ಮಮತಾಳ ಅಣ್ಣ ದಿಲೀಪ್ ಜಿಲ್ಲಾ ಯುವ ಕಾಂಗ್ರೆಸ್‌ನ ಅಧ್ಯಕ್ಷರಾಗಿದ್ದಾರೆ. ಅವರನ್ನು ಭೇಟಿಯಾದಾಗ ಅವರು ನೀಡಿದ ವಿವರಣೆ - ನನ್ನ ತಂಗಿಯ ಆರೋಗ್ಯ ಸುಧಾರಿಸಿದೆ, ಕಟಕ್‌ನಲ್ಲಿರುವ ಸ್ನೇಹಿತರೊಬ್ಬರ ಮನೆಯಲ್ಲಿದ್ದಾಳೆ. ಚಿಕಿತ್ಸೆ ಮುಂದುವರೆದಿದೆ. ಮನಶಾಸ್ತ್ರಜ್ಞರ ಚಿಕಿತ್ಸೆ ನಡೆಯುತ್ತಿರುವುದರಿಂದ ಆಕೆಯನ್ನು ಯಾರು ನೋಡುವಂತಿಲ್ಲ. ಸಂಬಂಧಪಟ್ಟ ವೈದ್ಯರ, ಆಸ್ಪತ್ರೆಯ ಮತ್ತು ಅವರಿಬ್ಬರು ಮಾಡಿಕೊಂಡ ಕರಾರು ಒಪ್ಪಂದದ ಪ್ರತಿಗಳ ಪ್ರತಿಯನ್ನು ದಿಲೀಪ್ ನೀಡಿದ್ದಾರೆ. ಮತ್ತೆ ಮಮತ ಕೆಲಸಕ್ಕೆ ಹೋಗುವುದು ಸರಿಯಲ್ಲ. ಆದ್ದರಿಂದ ಆಕೆ ಕೆಲಸ ಬಿಡಬೇಕು ಎಂದು ಆತ ಹೇಳಿದ್ದಾರೆ. ಇದು ಅವಳೆ ತೆಗೆದುಕೊಂಡ ನಿರ್ಧಾರವೆ ಎಂದು ಕೇಳಿದಾಗ ಅವರು ಇಲ್ಲ ಎಂದು ಆಯೋಗಕ್ಕೆ ತಿಳಿಸಿದರು.

ಸಂಬಂಧಪಟ್ಟ ಪೊಲೀಸ್‌ಠಾಣೆಗೆ ಆಯೋಗದವರು ಭೇಟಿ ನೀಡಿದಾಗ ಕೇಸ್ ದಾಖಲು ಮಾಡಿಕೊಂಡ ಅಧಿಕಾರಿಯವರು

ಸಿಗಲಿಲ್ಲ. ಅವರ ಸಹಾಯಕ ಅಧಿಕಾರಿ ಜತಿಂದರ್ ಸಾಹು (ASI) ಅವರು ಕೇಸಿಗೆ ಸಂಬಂಧಪಟ್ಟ ವಿಷಯವನ್ನು ತಿಳಿಸಿದರು. ಮೊನಲಿಸಾಳ ತಂದೆ ದಾಖಲು ಮಾಡಿರುವ FIRನ ಪ್ರತಿಯನ್ನು ಅವರು ತೋರಿಸಿದರು. ಮಮತಾಳೆ ಮೊನಲಿಸಾಳ ಸಾವಿಗೆ ಕಾರಣವೆಂದು ಅದರಲ್ಲಿ ತಿಳಿಸಲಾಗಿದೆ. ಈಗ ಕೇಸನ್ನು ಕಟಕ್‌ನ ಕ್ರೈಂ ಬ್ರಾಂಚಿಗೆ ವರ್ಗಾಯಿಸಲಾಗಿದೆಯೆಂದು ಅವರು ತಿಳಿಸಿದ್ದಾರೆ.

ಕೈಲಾಶ್ ರೌತ್ ಎಂಬ ನೋಟರಿಯವರು, ಗೌತಮ್ ಮುದಲಿ ಎಂಬ ವಕೀಲರ ಸಮ್ಮುಖದಲ್ಲಿ ಒಟ್ಟಿಗೆ ಬದುಕಬೇಕೆಂದು ಮಾಡಿಕೊಂಡ ಕರಾರು ಒಪ್ಪಂದದ ಪ್ರತಿಯನ್ನು ದೃಢೀಕರಿಸಿರುವುದರ ಪ್ರತಿಯನ್ನು ಆಯೋಗದವರು ಸಂಗ್ರಹಿಸಿದ್ದಾರೆ. ಒಪ್ಪಂದದ ಪತ್ರದಲ್ಲಿ ಅವರಿಬ್ಬರು ಒಟ್ಟಿಗೆ ಬದುಕಬೇಕೆಂದು ಮತ್ತು ಮುಂದಿನ ಜೀವನವನ್ನು ಅಸಹಾಯಕ ಮಹಿಳೆಯರ ಏಳಿಗೆಗೆ ಮೀಸಲಾಗಿಡಬಯಸುತ್ತೇವೆಂದು ತಿಳಿಸಿದ್ದಾರೆ.

ಎ.ಬಿ.ವಿ.ಎ. ಸಂಘಟನೆಗೆ ಘಟನೆ ಬಗ್ಗೆ ತಿಳಿಸಿದ ಸಾಮಾಜಿಕ ಕಾರ್ಯಕರ್ತನನ್ನು ಆಯೋಗದ ಸದಸ್ಯರು ಭೇಟಿ ಮಾಡಿದರು. ಹೆಸರನ್ನು ಬಹಿರಂಗ ಪಡಿಸಲು ಇಚ್ಛಿಸದ ಅವರು ಘಟನೆಗೆ ಸಂಬಂಧಪಟ್ಟ ವಿವರ ನೀಡಿದ್ದಾರೆ. ಸ್ಥಳೀಯ ಪತ್ರಿಕೆಯಲ್ಲಿ ಬಂದಿದ್ದರಿಂದ ತನಗೆ ವಿಷಯ ತಿಳಿಯಿತು. ತಿಳಿದ ಮೇಲೆ ಮಮತಾಳ ತಂದೆ-ತಾಯಂದಿರನ್ನು ನಾನು ಭೇಟಿ ಮಾಡಿ ಮಾತನಾಡಿಸಿದೆ. ಅವರಿಬ್ಬರು ನಿಕಟ ಗೆಳತಿಯರಾಗಿದ್ದು ಅವರ ಸ್ನೇಹ ಸಲಿಂಗ ಸಂಬಂಧವಾಗಿ ಮಾರ್ಪಾಡಾಗಿ ಒಟ್ಟಿಗೆ ಬದುಕಬೇಕೆಂದು ಇಚ್ಛಿಸಿದ್ದರು ಎಂಬುದು ಮಾತುಕತೆಯಿಂದ ತಿಳಿಯಿತು. ಮಮತಾಳು ಅಪಾಯದಿಂದ ಪಾರಾಗಿರುವುದಾಗಿಯೂ ಹಾಗು ಅವಳ ಎಡಗೈನ ಗಾಯಗಳಿನ್ನು ವಾಸಿಯಾಗಿಲ್ಲದಿರುವುದರಿಂದ ಪ್ಲಾಸ್ಟಿಕ್ ಸರ್ಜರಿ ಮಾಡಬೇಕಾಗಿದೆಯೆಂದು ತಿಳಿಯಿತು. ಆದರೆ ಮಮತಳನ್ನು ಭೇಟಿಯಾಗಲು ಸಾಧ್ಯವಾಗಲೇ ಇಲ್ಲ. ಸ್ಥಳೀಯ ಮಹಿಳಾ ಸಂಘಟನೆಗಳು ಈ ವಿಷಯ ಕುರಿತು ಪ್ರತಿಕ್ರಿಯಿಸಲಿಲ್ಲ.

ಸ್ಥಳೀಯ ಪತ್ರಿಕೆಗಳು ಘಟನೆ ಕುರಿತು ಕೆಟ್ಟದಾಗಿ ಬರೆದವು. ಸಮ್ಗಿಯ ಎಂಬ ಪತ್ರಿಕೆಯಲ್ಲಿ "ಸಮಾಜ ಅಂತಹ ಜನರನ್ನು ದ್ವೇಷಿಸುತ್ತದೆ. ಎಲ್ಲವನ್ನು ಕಳೆದುಕೊಂಡ ಸಮಾಜ ಅವರಿಗೆ ಸಮ್ಮತಿ ನೀಡುವುದಿಲ್ಲ. ಯೌವ್ವನದ ಭಾವೋದ್ರೇಕತೆಯಲ್ಲಿ ಮುಳುಗಿದ ಹುಚ್ಚಿನಲ್ಲಿ ನಾಚಿಕೆಗೆಟ್ಟವರನ್ನು ರಕ್ಷಿಸಲು ಸಾಧ್ಯವಿಲ್ಲ. ವಿಕೃತ ಲೈಂಗಿಕಾಸಕ್ತಿಯುಳ್ಳ ಹುಡುಗಿಯರು ಗಂಡು-ಹೆಣ್ಣಿನ ಸಂಬಂಧದ ಪ್ರೇಮವನ್ನು ಮರೆತು ತಮ್ಮದೆ ಲೈಂಗಿಕ ಭ್ರಮೆಯಲ್ಲಿ ಕಳೆದು ಹೋಗುತ್ತಾರೆ ಎಂದು ಪ್ರಕಟಿಸಿದ್ದಾರೆ. ಘಟನೆ ಕುರಿತು ವಿಚಾರಣೆ ಆಯೋಗ ಪಡೆದ ಮಾಹಿತಿಯ ಆಧಾರದ ಮೇಲೆ ಎ.ಬಿ.ವಿ.ಎ. ಅವರು ಈ ಬೇಡಿಕೆಗಳನ್ನು ಸರ್ಕಾರದ ಮುಂದಿಟ್ಟಿದ್ದಾರೆ.

* ರಾಷ್ಟ್ರೀಯ ಮಹಿಳಾ ಆಯೋಗದ ಮೂಲಕ ಮಮತಾ-ಮೊನಲಿಸರ ಕೇಸಿನ ಬಗ್ಗೆ ವಿಚಾರಣೆ ನಡೆಸಿ ಸತ್ಯವನ್ನು ಜನರ ಮುಂದಿಡಬೇಕು.
* ರಾಜ್ಯ ಸರ್ಕಾರವು ಮಮತಾಳ ಚಿಕಿತ್ಸೆಯ ವೆಚ್ಚವನ್ನು ಬರಿಸಬೇಕು. ಅವಳಿಗೆ ಅಗತ್ಯವಿರುವ ಪ್ಲಾಸ್ಟಿಕ್ ಸರ್ಜರಿಗಾಗಿ ದೆಹಲಿಯ AIMSSಗೆ ಸೇರಿಸಬೇಕು.
* ಅವಳ ಮೇಲಿರುವ ಎಲ್ಲ ಕೇಸನ್ನು ಹಿಂತೆಗೆದುಕೊಂಡು ಮುಂದೆ ಅವಳಿಗೆ ಪೊಲೀಸರಿಂದಾಗಬಹುದಾದ ಕಿರುಕುಳದಿಂದ ತಪ್ಪಿಸಬೇಕು.
* ಪ್ರೆಸ್ ಕೌನ್ಸಿಲ್ ಆಫ್ ಇಂಡಿಯಾದವರು, ಸಲಿಂಗಗಳಿಗೆ ಸಂಬಂಧಿಸಿದಂತೆ ಬರುವ ವರದಿಗಳು ಗೌರವಯುತ ವಾಗಿರಬೇಕೆಂಬುದರ ಬಗ್ಗೆ ಮಾರ್ಗದರ್ಶಿಗಳನ್ನು ಸೂಚಿಸಬೇಕು.
* ಒಂದೆ ಲಿಂಗದ ಜನರು ಒಟ್ಟಿಗೆ ಬದುಕುವ ಒಪ್ಪಂದವನ್ನು ಕಾನೂನುಬದ್ಧಗೊಳಿಸಬೇಕು ಮತ್ತು ಅದನ್ನು ಸಹ ಕುಟುಂಬವೆಂದು ಪರಿಗಣಿಸಬೇಕು.
* ವಿಶೇಷ ವಿವಾಹ ಕಾಯ್ದೆಯನ್ನು ತಿದ್ದುಪಡಿ ಮಾಡಿ ಅದರಲ್ಲಿನ ಎಲ್ಲಾ ಸವಲತ್ತುಗಳನ್ನು (ಆಸ್ತಿ ಹಕ್ಕು, ಮಕ್ಕಳನ್ನು ದತ್ತು ಪಡೆಯುವ ಹಕ್ಕು ಇತ್ಯಾದಿ) ಸಲಿಂಗ ಸಂಬಂಧ ಹೊಂದಿದವರಿಗೂ ಅನ್ವಯಿಸಬೇಕು.

*ಕೃಪೆ : ಫಾರ್ ಪೀಪಲ್ ಲೈಕ್ ಅಸ್*

*A.B.V.A. ಅವರ ವರದಿ*

# ಸುಪ್ರೀಂ ಕೋರ್ಟ್ ನೀಡಿದ ಮಹತ್ವದ ತೀರ್ಪು

ಅದೊಂದು ಸಣ್ಣ ಕೆಲಸವಾಗಿತ್ತು. ಕೆಲವು ಷೇರುಗಳಿಗೆ ಸಹಿ ಮಾಡಿದ್ದರೆ ಕೆಲಸವೇ ಮುಗಿದು ಹೋಗುತ್ತಿತ್ತು. ಆದರೆ ಈ ಸಣ್ಣ ಕೆಲಸದ ಹಿಂದೆ ಒಂದು ಮಹತ್ವವಾದ ಐತಿಹಾಸಿಕವಾದ ತೀರ್ಪು ಅಡಗಿದೆಯೆಂಬುದು ಅರಿವಿಗೆ ಬಂದಿದ್ದು ಸುಪ್ರೀಂ ಕೋರ್ಟ್ ಕಟ್ಟೆಯನ್ನೇರಿದ ಮೇಲೆಯೆ!

ಮಹಿಳೆಯರ ಜೀವನದಲ್ಲಿ ಮೈಲಿಗಲ್ಲಾಗಬಹುದಾದ ಒಂದು ಮಹತ್ವವಾದ ತೀರ್ಪನ್ನು ಸುಪ್ರೀಂ ಕೋರ್ಟ್ ನೀಡಿದೆ. ಹಿಂದೂ ಮೈನಾರಿಟಿ ಹಾಗೂ ಗಾರ್ಡಿಯನ್‌ಶಿಪ್ ಕಾನೂನಿನ ಪ್ರಕಾರ ಇದುವರೆಗೆ ಅಪ್ರಾಪ್ತ ವಯಸ್ಸಿನ ಮಕ್ಕಳಿಗೆ ತಂದೆಯೇ ಸಹಜವಾದ ಪೋಷಕ. ಆದರೆ ಸುಪ್ರೀಂ ಕೋರ್ಟ್ ನೀಡಿದ ಈ ಮಹತ್ವಪೂರ್ಣವಾದ ತೀರ್ಪಿನಿಂದಾಗಿ ತಾಯಿಯು ಸಹ ಅಪ್ರಾಪ್ತ ವಯಸ್ಸಿನ ಮಕ್ಕಳಿಗೆ ಸಹಜವಾದ ಪೋಷಕಳಾಗ ಬಹುದಾದ ಹಕ್ಕು ದೊರೆತಿದೆ.

ಖ್ಯಾತ ಲೇಖಕಿಯಾದ ಗೀತಾ ಹರಿಹರನ್ ೧೯೯೫ರಲ್ಲಿ ರಿಸರ್ವ್ ಬ್ಯಾಂಕಿನಲ್ಲಿ ತಮ್ಮ ಮಗನ ಹೆಸರಿನಲ್ಲಿ ಸ್ವಲ್ಪ ಹಣವನ್ನು ತೊಡಗಿಸಲು ಅರ್ಜಿ ಸಲ್ಲಿಸಿದ್ದರು. ಆದರೆ ರಿಸರ್ವ್ ಬ್ಯಾಂಕ್ ಹಿಂದೂ ಮೈನಾರಿಟಿ ಹಾಗೂ ಗಾರ್ಡಿಯನ್‌ಶಿಪ್ ಕಾನೂನಿನ ಪ್ರಕಾರ ಅವಳ ಸಹಿಯನ್ನೂ ಒಪ್ಪಿಕೊಳ್ಳಲು ಸಾಧ್ಯವಿಲ್ಲವೆಂದು ಅವರ ಅರ್ಜಿಯನ್ನು ತಿರಸ್ಕರಿಸಲಾಯಿತು.

ಗೀತಾ ಹಾಗೂ ಹರಿಹರನ್ ವಿವಾಹ ವಿಚ್ಛೇದನವನ್ನು ಪಡೆದವರು. ದೆಹಲಿಯ ನೆಹರೂ ವಿಶ್ವವಿದ್ಯಾಲಯದಲ್ಲಿ ಕೆಲಸ ಮಾಡುವ ಹರಿಹರನ್ ಹಾಗೂ ಗೀತಾ, ಜಂಟಿಯಾಗಿ ಪತ್ರ ಬರೆದು ತಾವಿಬ್ಬರೂ ಮಗನ ಹೆಸರಿನಲ್ಲಿ ಹಣ ತೊಡಗಿಸುವುದನ್ನೂ ಒಪ್ಪಿರುವುದನ್ನು ಹಾಗೂ ಗೀತಾ ಮಗನ ಪೋಷಕಿಯೆಂದು ತಿಳಿಸಿ ಬ್ಯಾಂಕಿಗೆ ಪತ್ರ ಬರೆದರು. ಆದರೆ ಬ್ಯಾಂಕ್ ಇದಕ್ಕೆ ಸಮ್ಮತಿ ನೀಡಲಿಲ್ಲ. ಹರಿಹರನ್ ಗಾರ್ಡಿಯನ್ ಆಗಲು ಅಸಮರ್ಥನಾದ ಪಕ್ಷದಲ್ಲಿ ಮಾತ್ರ ತಾಯಿ ಮಕ್ಕಳ ಪೋಷಕಿಯಾಗಬಹುದು ಎಂದು ವಾದಿಸಲಾಯಿತು.

ಮಹಿಳೆಯರ ಮೂಲಭೂತ ಹಕ್ಕನ್ನೂ ಹೇಗೆ ದಮನ ಮಾಡಲಾಗುತ್ತಿದೆ, ಹಾಗೂ, ಪಕ್ಷಪಾತ ಮಾಡಲಾಗುತ್ತಿದೆಯೆಂಬ ಆಕ್ರೋಶದಿಂದ ಈ ಧೋರಣೆಯ ವಿರುದ್ಧ ಗೀತಾ ತಮ್ಮ ಹೋರಾಟವನ್ನು ಪ್ರಾರಂಭಿಸಿದರು.

ಈ ಕಾನೂನಿನ ಹಿಂದಿರುವ ಪಕ್ಷಪಾತ ಧೋರಣೆಯನ್ನು ಪ್ರಶ್ನಿಸಿ ಖ್ಯಾತ ಪರಿಸರವಾದಿ ವಂದನಾ ಶಿವಾರವರು ನ್ಯಾಯಲಯದಲ್ಲಿ ಹೋರಾಟವನ್ನು ನಡೆಸಿದ್ದಾರೆ. ವಂದನಾ ಶಿವಾರವರ ವಿಚ್ಛೇದಿತ ಗಂಡ ಅಪ್ರಾಪ್ತ ವಯಸ್ಸಿನ ಮಕ್ಕಳ ಸಹಜವಾದ ಪೋಷಕ ತಾನೆಂದು ಮಕ್ಕಳನ್ನು ತನಗೆ ಕೊಡಿಸಬೇಕೆಂದು ವಾದ ಮಾಡಿದ್ದಾರೆ.

ಈ ಎರಡು ಕೇಸುಗಳಿಂದಾಗಿ ಸುಪ್ರೀಂ ಕೋರ್ಟ್‌ನಲ್ಲಿ ಈ ಕಾನೂನಿಗೆ ಸಂಬಂಧಪಟ್ಟಂತೆ ಸಾಕಷ್ಟು ವಿವರವಾದ ಚರ್ಚೆಯೇ ನಡೆದಿದೆ. ತಂದೆಯ ನಂತರ ಎಂಬುದನ್ನು ಸಾಮಾನ್ಯವಾಗಿ ತಂದೆ ಮರಣದ ನಂತರ ಎಂದು ವ್ಯಾಖ್ಯಾನಿಸಲಾಗಿದೆ. ಈ ಎರಡು ಕೇಸಿನ ವಕೀಲರಾದ ಮಹಿಳೆ ಇಂದಿರಾ ಜೈಸಿಂಗ್ ಸಂವಿಧಾನದಲ್ಲಿ ಮಹಿಳೆಯರಿಗೆ ನೀಡಲಾದ ಮೂಲಭೂತ ಹಕ್ಕನ್ನು ಈ ಕಾನೂನು ಉಲ್ಲಂಘಿಸುತ್ತದೆ. ಅಪ್ರಾಪ್ತ ವಯಸ್ಸಿನ ಮಕ್ಕಳ ಪೋಷಕಿಯಾದ ತಾಯಿಯನ್ನು ಅಸಮಾನತೆಯಿಂದ ನೋಡಲಾಗಿದೆಯಲ್ಲದೆ, ಆಕೆಯನ್ನು ಕೆಳದರ್ಜೆಗೆ ತಳ್ಳಲಾಗಿದೆ ಯೆಂದು ವಾದಿಸಿದರು.

ಕಳೆದ ಫೆಬ್ರುವರಿಯಲ್ಲಿ ಸುಪ್ರೀಂ ಕೋರ್ಟ್, "ರಿಸರ್ವ್ ಬ್ಯಾಂಕ್ ನೀಡಿದ ಆದೇಶ ಸರಿಯಲ್ಲವೆಂದು, 'ನಂತರ' ಎಂಬುದನ್ನು, ತಂದೆಯ ಗೈರುಹಾಜರಿ, ಯಾವುದೇ ಕಾರಣದಿಂದ ಮಗುವಿನ ಅಥವಾ ಆಸ್ತಿಯ ಉಸ್ತುವಾರಿ ಜವಾಬ್ದಾರಿಯ ಗೈರುಹಾಜರಿ ಎಂದು ವ್ಯಾಖ್ಯಾನಿಸಬಹುದು ಎಂದು ತಿಳಿಸಿದೆ. ಮಕ್ಕಳ ಬೆಳವಣಿಗೆಯಲ್ಲಿ ತಂದೆಯ ನಿರಾಸಕ್ತಿ, ಅಥವಾ ಮಕ್ಕಳ ಬಳಿ ತಂದೆ ಇರಲು ಸಾಧ್ಯವಾಗದೇ ಇರುವುದು, ಗಂಡ-ಹೆಂಡತಿಯರಲ್ಲಿ ಸಾಮರಸ್ಯವಿಲ್ಲದೆ, ತಾಯಿಯ ಜವಾಬ್ದಾರಿಯಲ್ಲಿ ಮಕ್ಕಳು ಬೆಳೆಯುವಂತಹ ಸಂದರ್ಭದಲ್ಲಿ ಎಂದು ವ್ಯಾಖ್ಯಾನಿಸಲಾಯಿತು.

ಸುಪ್ರೀಂ ಕೋರ್ಟ್ ನೀಡಿದ ಈ ತೀರ್ಪು ಮಹಿಳೆಯರು ನಿರ್ಧಾರ ತೆಗೆದುಕೊಳ್ಳುವ ಹಕ್ಕನ್ನು ಎತ್ತಿ ಹಿಡಿದಿದೆ. ಮಕ್ಕಳ ಬೆಳವಣಿಗೆಯಲ್ಲಿ ತಂದೆಗೆ ಇರುವಷ್ಟೇ ಸಮಾನವಾದ ಹಕ್ಕನ್ನು ತಾಯಿಗೂ ನೀಡಲಾಗಿದೆ.

ವಿವಾಹ ಮುರಿದು ಹೋಗಿದ್ದು ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ತನ್ನ ಸ್ವಾಮ್ಯಕ್ಕೆ ಪಡೆಯಲು ಹೋರಾಡುತ್ತಿರುವ ಮಹಿಳೆಯರಿಗೆ ಈ ತೀರ್ಪು ಬಹುಮುಖ್ಯವಾದುದೆಂದು ಗೀತಾ ಭಾವಿಸುತ್ತಾರೆ. •

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 75 ರೂ**

ಸಂ. ಮಂಡಳಿ

REGD No. KRNA 324

BOOK-POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067